




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol. - 13 | July 2015 | Issue No. 03 | ₹ 10/-


The Bharat Scouts & Guides, Karnataka condoles the passing away of BHARATHA RATNA Dr. A.P.J. Abdul Kalam Former President of India, a Distinguished and Eminent Scientist & Professor, a Humanitarian, Great Visionary of Indian Culture & Heritage, a Karmayogi & Eminent Son of India on 27 July 2015 at the Indian Institute of Management, Shillong, Meghalaya.



**"Scouts and Guides are our National Wealth"**

**- Dr. A.P.J. Abdul Kalam, President of India**

**at the Inaguration of 15th National Jamboree of Scouts & Guides held at Haridwar, Uttarkhand State on 16 October 2005**

# ಶ್ರದ್ಧಾಂಜಲಿ





## ದಿ|| ಸಿ.ಆರ್. ಮಹಮ್ಮದ್ ಜಹೀರುದ್ದೀನ್

### ಮಾಜಿ ರಾಜ್ಯ ಆಯುಕ್ತರು (ಸ್ಕೌಟ್ಸ್)

ಚಿತ್ರದುರ್ಗ ಜಿಲ್ಲೆಯ ಹೆಸರಾಂತ ನ್ಯಾಯವಾದಿಗಳು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಮಾಜಿ ರಾಜ್ಯ ಸ್ಕೌಟ್ಸ್ ಆಯುಕ್ತರಾದ ಶ್ರೀ ಸಿ.ಆರ್. ಮಹಮದ್ ಜಹೀರುದ್ದೀನ್ ರವರು ದಿನಾಂಕ 21 ಜುಲೈ 2015 ರಂದು ತಮ್ಮ 83ನೇ ವಯಸ್ಸಿನಲ್ಲಿ ಚಿತ್ರದುರ್ಗದಲ್ಲಿ ನಿಧನರಾದರು. ಇವರು ಪತ್ನಿ, ಮಗ, ಮಗಳು, ಮೊಮ್ಮಕ್ಕಳು ಮತ್ತು ಐದು ಜನ ಸಹೋದರರು ಹಾಗೂ ಅಪಾರ ಬಂದು–ಮಿತ್ರರನ್ನು ಅಗಲಿದ್ದಾರೆ.

ಶ್ರೀ ಸಿ.ಆರ್. ಮಹಮದ್ ಜಹೀರುದ್ದೀನ್ ಅವರು ಚಿತ್ರದುರ್ಗ ಜಿಲ್ಲೆ ಮತ್ತು ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಬೆಳವಣಿಗೆಗೆ ಹಲವಾರು ದಶಕಗಳು ಪ್ರಾಮಾಣಿಕ ಸೇವೆ ಸಲ್ಲಿಸಿದ್ದಾರೆ. ಚಿತ್ರದುರ್ಗ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ನಿವೇಶನ ಹಾಗು ಕಟ್ಟಡ ನಿರ್ಮಾಣದಲ್ಲಿ ಸೇವೆ ಸಲ್ಲಿಸಿದ್ದಾರೆ, ಚಿತ್ರದುರ್ಗ ಜಿಲ್ಲಾ ಸ್ಕೌಟ್ಸ್ ಆಯುಕ್ತರಾಗಿ, ಜಿಲ್ಲಾ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ, ಬೆಂಗಳೂರು ವಿಭಾಗದ ಸಹಾಯಕ ರಾಜ್ಯ ಸ್ಕೌಟ್ಸ್ ಆಯುಕ್ತರಾಗಿ ಮತ್ತು ನವದೆಹಲಿ ರಾಷ್ಟ್ರೀಯ ಪರಿಷತ್ತಿನ ಸದಸ್ಯರಾಗಿ, ರಾಜ್ಯ ಸ್ಕೌಟ್ಸ್ ಆಯುಕ್ತರಾಗಿ ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಸ್ಕೌಟ್ಸ್–ಗೈಡ್ಸ್ ಚಳವಳಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ್ದಾರೆ. ಇವರ ದೀರ್ಘಕಾಲದ ಅಮೂಲ್ಯ ಸೇವೆಯನ್ನು ಪರಿಗಣಿಸಿ ಇವರಿಗೆ ರಾಷ್ಟ್ರೀಯ ಸಂಸ್ಥೆಯವರು ಅತ್ಯುನ್ನತ ಪ್ರಶಸ್ತಿಯಾದ "ಬೆಳ್ಳಿ ಆನೆ" ಪ್ರಶಸ್ತಿಯನ್ನು ಭಾರತದ ಘನತೆವೆತ್ತ ರಾಷ್ಟ್ರಪತಿಗಳಿಂದ 1999ರಲ್ಲಿ ಸ್ವೀಕರಿಸಿರುತ್ತಾರೆ.

22 ಜುಲೈ ರಂದು ರಾಜ್ಯ ಸಂಸ್ಥೆಯ ಪರವಾಗಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀಮತಿ ಪಿ. ಸರೋಜ, ಶ್ರೀ ಮಹಮದ್ ವಾಸಿಲ್, ಶ್ರೀ ಎಂ.ಎ. ಚೆಲ್ಲಯ್ಯ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಅವರ ನಿವಾಸಕ್ಕೆ ತೆರಳಿ ಶ್ರೀ ಸಿ.ಆರ್. ಮಹಮ್ಮದ್ ಜಹೀರುದ್ದೀನ್ ಅವರ ಪಾರ್ಥೀವ ಶರೀರಕ್ಕೆ ಪುಷ್ಪಗುಚ್ಛದ ಮೂಲಕ ನಮನಗಳನ್ನು ಸಲ್ಲಿಸಿ ಅವರ ಕುಟುಂಬ ವರ್ಗದವರಿಗೆ ಸಾಂತ್ವನ ಹೇಳಿದರು.

22 ಜುಲೈ ರಂದು ಮಧ್ಯಾಹ್ನ ಜಿಲ್ಲಾ ಸಂಸ್ಥೆ ಕಛೇರಿಯಲ್ಲಿ ಜರುಗಿದ ಸಂತಾಪ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ತಮ್ಮ ನುಡಿ ನಮನದಲ್ಲಿ ಸ್ಕೌಟ್ಸ್ ದಿಗ್ಗಜರಲ್ಲೊಬ್ಬರಾದ ಮಾಜಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಸಚಿವರಾಗಿದ್ದ ದಿವಂಗತ ಕೊಂಡಜ್ಜಿ ಬಸಪ್ಪರೊಂದಿಗೆ ಮತ್ತು ರಾಷ್ಟ್ರೀಯ ಆಯುಕ್ತರಾಗಿದ್ದ ದಿವಂಗತ ವಿ.ಪಿ. ಧೀನದಯಾಳು ನಾಯ್ಡುರವರೊಂದಿಗೆ ಶ್ರೀ ಮಹಮ್ಮದ್ ಜಹೀರುದ್ದೀನ್ ನಿಕಟ ಸಂಪರ್ಕ ಹೊಂದಿದ್ದರು ಎಂದು ನುಡಿದರು. ಸಭೆಯಲ್ಲಿ ರಾಜ್ಯ ಸಂಸ್ಥೆಯ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಶ್ರೀ ಮಹಮ್ಮದ್ ವಾಸಿಲ್, ಶ್ರೀಮತಿ ಪಿ. ಸರೋಜ, ಶ್ರೀ ಎಂ.ಎ. ಚೆಲ್ಲಯ್ಯ ಅವರುಗಳು ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಸ್ಕೌಟರ್ಸ್–ಗೈಡರ್ಸ್‌ಗಳು ಭಾಗವಹಿಸಿ ಶ್ರೀ ಸಿ.ಆರ್. ಮಹಮದ್ ಜಹೀರುದ್ದೀನ್ ಅವರ ಹಲವುದಶಕಗಳ ಸ್ಕೌಟ್–ಗೈಡ್ ಚಳವಳಿಗೆ ಸಲ್ಲಿಸಿದ ನಿಸ್ವಾರ್ಥ ಸೇವೆಯನ್ನು ಸ್ಮರಿಸಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ, ಅವರ ಕುಟುಂಬ ವರ್ಗಕ್ಕೆ ಆಗಿರುವ ದುಃಖವನ್ನು ಸಹಿಸುವ ಶಕ್ತಿಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸಿದ ನಂತರ ಸಭೆಯಲ್ಲಿ ಭಾಗವಹಿಸಿದವರೆಲ್ಲರೂ ಒಂದು ನಿಮಿಷ ಮೌನ ಪ್ರಾರ್ಥನೆ ಸಲ್ಲಿಸಿದರು.

– ರಾಜ್ಯ ಕಾರ್ಯದರ್ಶಿ



ಶ್ರೀ ಶ್ರೀ ಜಿತಕಾಮಾನಂದ ಸ್ವಾಮೀಜಿ, ರಾಮಕೃಷ್ಣಾಶ್ರಮ, ಮಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆಯ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್‌ರನ್ನು ಸನ್ಮಾನಿಸುತ್ತಿರುವುದು. ಚಿತ್ರದಲ್ಲಿ ಶ್ರೀ ವಿನಯ್‌ಕುಮಾರ್‌ಸೊರಕೆ, ಮಾನ್ಯ ನಗರಾಭಿವೃದ್ಧಿ ಇಲಾಖೆ ಸಚಿವರು, ಕರ್ನಾಟಕ ಸರ್ಕಾರ ಹಾಗೂ ಇತರರನ್ನು ಕಾಣಬಹುದು.



ಶ್ರೀ ಯು.ಟಿ. ಖಾದರ್, ಮಾನ್ಯ ಸಚಿವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಕೊಣಾಜೆ ಪರಂಡೆ, ಉಲ್ಲಾಳ ಮಂಗಳೂರಿನಲ್ಲಿ ಕೆಸರು ಗದ್ದೆಯಲ್ಲಿ ನಡೆದ ಹಗ್ಗ ಜಗ್ಗಾಟ ಆಟದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳೊಡನೆ ಭಾಗವಹಿಸಿದ ಚಿತ್ರ.





ಡಾ॥ ತ್ರಿಲೋಕ ಚಂದ್ರ, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ರಾಷ್ಟ್ರಪತಿ ಪದಕ ಪಡೆದ ಸ್ಕೌಟ್ಸ್-ಗೈಡ್ಸ್ ಚುತುರ್ಥ ಚರಣ್ ಕಬ್ಸ್ ಹಾಗೂ ಹೀರಕ್ ಪಂಖ್ ಬುಲ್‌ಬುಲ್ಸ್‌ಗಳನ್ನು ಸನ್ಮಾನಿಸಿದರು. ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಹಾಗೂ ಜಿಲ್ಲಾ ಪದಾಧಿಕಾರಿಗಳು, ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳನ್ನು ಕಾಣಬಹುದು.






ಶ್ರೀ ಎಸ್. ಸಶಿಕಾಂತ್ ಸೆಂಥಿಲ್, ಭಾ.ಆ.ಸೇ., ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರು ರಾಷ್ಟ್ರಪತಿ ಪದಕ ಪಡೆದ ಸ್ಕೌಟ್ಸ್ ಗೈಡ್ಸ್‌ಗಳನ್ನು ಸನ್ಮಾನಿಸುತ್ತಿರುವುದು. ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಮತ್ತು ಜಿಲ್ಲೆಯ ಇತರ ಪದಾಧಿಕಾರಿಗಳನ್ನು ಕಾಣಬಹುದು.



4 ಜುಲೈ 2015ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ಏರ್ಪಡಿಸಿದ್ದ ರಾಜ್ಯ ಸಂಸ್ಥೆಯ ಹಿಂದಿನ ಚೀಫ್ ಕಮಿಷನರ್ ಆಗಿದ್ದ ದಿ॥ ಮೇಜರ್ ವೈ.ವಿ.ಕೆ. ಮೂರ್ತಿ ಅವರ ಜನ್ಮದಿನೋತ್ಸವವನ್ನು ಆಚರಿಸಲಾಯಿತು. ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರೊಂದಿಗೆ ಮೇಜರ್ ವೈ.ವಿ.ಕೆ. ಮೂರ್ತಿ ಅವರ ಕುಟುಂಬವರ್ಗದವರಾದ ಶ್ರೀ ಮಾದವಸ್ವಾಮಿ ಮತ್ತು ಮೊಮ್ಮಗನಾದ ಶ್ರೀ ಸತ್ಯಮೂರ್ತಿ ಹಾಗೂ ಪತ್ನಿ ಮತ್ತು ಮಕ್ಕಳು ಇದ್ದಾರೆ.



ಸಂದೇಶ್ ಆರ್. ರಾಯ್ಕರ್ (ಬಿ.ಇ) ಅಭಿಶೇಕ್ ವಿ. ಬೂಸ್ನೂರು (ಬಿ.ಎಸ್ಸಿ., ಅಗ್ರಿ) ಪ್ರಸಾದ್ .ಜಿ (ಬಿ.ಇ)

ರಾಷ್ಟ್ರಪತಿ ಸ್ಕೌಟ್ ಖೋಟಾದಡಿಯಲ್ಲಿ ವೃತ್ತಿಪರ ಶಿಕ್ಷಣದಲ್ಲಿ ಆಯ್ಕೆಯಾದ ದಾವಣಗೆರೆಯ ನೇತಾಜಿ ಮುಕ್ತದಳದ ಸ್ಕೌಟ್ಸ್‌ಗಳು ಹಾಗೂ ಅವರ ಪೋಷಕರುಗಳನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ 17 ಜುಲೈ 2015ರಂದು ಉಡುಪಿಯಲ್ಲಿ ಜರುಗಿದ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶದ ಉದ್ಘಾಟನಾ ಸಮಾರಂಭದಲ್ಲಿ ಜಿಲ್ಲೆಯ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಮಧುಕರ್, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಪಿ. ರಬೀಂದ್ರ ನಾಯಕ್, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.




ಬೆಳಗಾವಿ ಜಿಲ್ಲಾ ಸಂಸ್ಥೆಯವರು ರಾಜ್ಯ ಪುರಸ್ಕಾರ ಸ್ಕೌಟ್ಸ್/ಗೈಡ್ಸ್, ಚತುರ್ಥ ಚರಣ್, ಹೀರಕ್ ಪಂಖ್ ಪ್ರಶಸ್ತಿಗಳನ್ನು ಪಡೆದವರನ್ನು ಸನ್ಮಾನಿಸುತ್ತಿರುವ ಚಿತ್ರ. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Monthly Published by

**The Bharat Scouts & Guides, Karnataka**

State Headquarters, Shanthigruha

# 39, Palace Road, Bengaluru-560 001

Tel : 080-2226 0017, 2226 7470




**ಪರಿವಿಡಿ**




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/-** ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org | www.kondajjibasappa.org**

**Face book ground Link: BSGKJamborette2015**

# ರಾಜ್ಯ ಮುಖ್ಯ ಆಯುಕ್ತರ ನುಡಿ



ಆತ್ಮೀಯ ಸ್ನೇಹಿತರೆ,

ಸ್ಕೌಟ್ಸ್ ಗೈಡ್ಸ್ ಚಳವಳಿಯ ಜೂನ್ ಮತ್ತು ಜುಲೈ ತಿಂಗಳ ಮಾಸಿಕ ವಾರ್ತಾ ಪತ್ರಿಕೆಗೆ ನನ್ನ ಕೆಲವು ಅನಿಸಿಕೆಗಳನ್ನು ಓದುಗರಿಗೆ ತಿಳಿಸಬೇಕೆಂದು ಎಲ್ಲರ ಅಪೇಕ್ಷೆ. ಅದರಂತೆ, ನನ್ನ ಅನುಭವಗಳನ್ನು ತಮ್ಮೆಲ್ಲರೊಡನೆ ಹಂಚಿಕೊಳ್ಳಲು ಬಯಸುತ್ತೇನೆ. ಜೂನ್ ಮತ್ತು ಜುಲೈ ಎರೆಡು ತಿಂಗಳುಗಳಲ್ಲಿ ಕಲಬುರಗಿ, ರಾಯಚೂರು, ಚಿಕ್ಕಬಳ್ಳಾಪುರ, ಮೈಸೂರು, ಚಾಮರಾಜನಗರ, ವಿಜಯಪುರ, ಬಾಗಲಕೋಟೆ, ತುಮಕೂರು ಮತ್ತು ಕೋಲಾರ ಜಿಲ್ಲೆಗಳಿಗೆ ಭೇಟಿ ನೀಡಿ ಜಿಲ್ಲೆಗಳ ಪದಾಧಿಕಾರಿಗಳು ಮತ್ತು ಇತರರೊಡನೆ ಚರ್ಚಿಸಿದ್ದೇನೆ ಬಹುತೇಕ ಜಿಲ್ಲೆಗಳಲ್ಲಿ ಸರ್ಕಾರದ ಅಧಿಕಾರಿ ಮಿತ್ರರುಗಳನ್ನು, ಜಿಲ್ಲಾಧಿಕಾರಿಗಳನ್ನು. ಜಿಲ್ಲೆಯ ಶಿಕ್ಷಣ ಇಲಾಖೆಯ ಅಧಿಕಾರಿ ಮಿತ್ರರುಗಳನ್ನು ಭೇಟಿ ಮಾಡಿದ್ದೇನೆ. ಜೊತೆಗೆ ನಮ್ಮ ಸಂಸ್ಥೆಯಲ್ಲಿ ಅನೇಕ ದಶಕಗಳ ಕಾಲ ದುಡಿದಿರುವ ಪ್ರಮುಖರೊಡನೆ ಸಮಾಲೋಚನೆ ಮಾಡಿರುತ್ತೇನೆ. ಎಲ್ಲಕ್ಕಿಂತ ಹೆಚ್ಚಾಗಿ ನಮ್ಮ ಚಳವಳಿಯ ಮಕ್ಕಳೊಡನೆ ಬೆರೆತಿದ್ದೇನೆ. ವಿಜಯಪುರದಲ್ಲಿ ನಡೆದ ವನಮಹೋತ್ಸವ ಕಾರ್ಯಕ್ರಮ, ರಾಯಚೂರಿನಲ್ಲಿ ನಡೆದ ಮಕ್ಕಳ ಪ್ರಶಸ್ತಿ ವಿತರಣಾ ಕಾರ್ಯಕ್ರಮಗಳು ಅವಿಸ್ಮರಣೀಯ. ಇವುಗಳಿಂದ ನಾವೆಲ್ಲರೂ ಸ್ಫೂರ್ತಿ ಪಡೆದು ಮುಂದೆ ನಡೆಯಬೇಕಾಗಿದೆ.

ಉನ್ನತ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಭರತ್‌ಲಾಲ್ ಮೀನಾ, ಭಾ.ಆ.ಸೇ., ಮತ್ತು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಕಪಿಲ್ ಮೋಹನ್, ಭಾ.ಆ.ಸೇ., ಹಾಗೂ ಉನ್ನತ ಶಿಕ್ಷಣ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ ಎಸ್.ವಿ.ರಂಗನಾಥ್, ಭಾ.ಆ.ಸೇ., (ನಿ.) ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಕೆ.ಎಸ್. ಸತ್ಯಮೂರ್ತಿ, ಭಾ.ಆ.ಸೇ., ಮತ್ತು ಇನ್ನೂ ಅನೇಕ ಅಧಿಕಾರಿಗಳೊಂದಿಗೆ ಸಮಾಲೋಚನೆ ಮಾಡಿದ್ದೇವೆ. ಎಲ್ಲಾ ಅಧಿಕಾರಿಗಳು ಈ ಸಂಸ್ಥೆಯು ಬೆಳೆಯಬೇಕೆಂದು ಬಯಸಿದ್ದಾರೆ.

ಬಹಳ ದಿನಗಳ ನಂತರ ಮಾನ್ಯ ಶ್ರೀ ಸತ್ಯಮೂರ್ತಿ ರವರು ರಾಜ್ಯದ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರುಗಳ ಸಭೆಯಲ್ಲಿ, ನಮ್ಮ ಸಂಸ್ಥೆಯ ಪದಾಧಿಕಾರಿಗಳಿಗೆ ಭಾಗವಹಿಸಲು ಅವಕಾಶ ನೀಡಿ, ನಮ್ಮ ಬಹು ದಿನಗಳ ಬೇಡಿಕೆಗಳನ್ನು ಈಡೇರಿಸುವ ಭರವಸೆ ನೀಡಿದ್ದಾರೆ. ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯವರು ನಮ್ಮ ರಾಜ್ಯದ ಪ್ರತಿ ಜಿಲ್ಲೆಯಲ್ಲಿಯೂ ಇಬ್ಬರು ಶಿಕ್ಷಕರನ್ನು ಸ್ಕೌಟ್ಸ್ ಗೈಡ್ಸ್ ಸಂಘಟಕರುಗಳಾಗಿ ಕಾರ್ಯನಿರ್ವಹಿಸಲು ಒಪ್ಪಿಗೆ ಕೊಟ್ಟಿರುತ್ತಾರೆ ಮತ್ತು ನಮ್ಮ ಬಹುದಿನಗಳ ಹಲವಾರು ಬೇಡಿಕೆಗಳನ್ನು ಈಡೇರಿಸಲು ಒಪ್ಪಿಗೆ ಕೊಟ್ಟಿರುತ್ತಾರೆ. ಈ ಎಲ್ಲಾ ಅಧಿಕಾರಿಗಳಿಗೆ ನಾನು ಚಿರಋಣಿ.

ನಮ್ಮ ಚಳವಳಿಯ ರಾಷ್ಟ್ರೀಯ ಮುಖಂಡರು ಹಾಗೂ ಕೇಂದ್ರ ಸರ್ಕಾರದ ಮಾಜಿ ಸಚಿವರಾಗಿದ್ದ ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಆಚರಣೆಯನ್ನು ಮಾಡಲು ದೆಹಲಿಗೆ ಭೇಟಿ ನೀಡಿದ್ದೇನೆ. ದೆಹಲಿಯಲ್ಲಿ ಅನೇಕ ಕೇಂದ್ರ ಸಚಿವರುಗಳನ್ನು ಭೇಟಿ ಮಾಡಿರುತ್ತೇನೆ. ಕೇಂದ್ರ ಸರ್ಕಾರದ ಸಚಿವರಾದ ಶ್ರೀ ಜಿ.ಎಂ.ಸಿದ್ದೇಶ್ವರ್ ರವರ ಮುಖಂಡತ್ವದಲ್ಲಿ ಅಕ್ಟೋಬರ್ ತಿಂಗಳಲ್ಲಿ ಶ್ರೀ ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವವನ್ನು ದೆಹಲಿಯಲ್ಲಿ ಆಚರಿಸಲು ಒಪ್ಪಿಗೆ ನೀಡಿದ್ದಾರೆ. ಇಂದಿಗೂ ಕೊಂಡಜ್ಜಿ ಬಸಪ್ಪನವರ ಸೇವೆ, ಅವರ ಹೆಸರನ್ನು ಸದಾ ಸ್ಮರಣೆಯಲ್ಲಿಟ್ಟಿದೆ.

ಈ ಎರೆಡೂ ತಿಂಗಳುಗಳಲ್ಲಿ ರಾಜ್ಯ ಮಟ್ಟದಲ್ಲಿ ವಿವಿಧ ಸಮಿತಿಗಳ ಸಭೆಗಳನ್ನು ನಡೆಸಿದ್ದೇವೆ. ರಾಜ್ಯ ಕಾರ್ಯಕಾರಿ ಸಮಿತಿ ಸಭೆಯು ಈ ತಿಂಗಳಿನಲ್ಲಿ ನಡೆಯಲಿದೆ. ಹಿರಿಯರಾದ ಡಾ॥ ಗೊ.ರು. ಚನ್ನಬಸಪ್ಪನವರು ನಮ್ಮ ತಂಡಕ್ಕೆ ಮಾರ್ಗದರ್ಶನ ನೀಡುತ್ತಿರುತ್ತಾರೆ. ಸ್ಕೌಟ್ಸ್ ಗೈಡ್ಸ್ ಗಣತಿಯ ಗುರಿ 10 ಲಕ್ಷ ತಲುಪುವುದು. ಇದಕ್ಕಾಗಿ ನಮ್ಮೆಲ್ಲಾ ಪದಾಧಿಕಾರಿಗಳು, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳು, ಮಂತ್ರಿ ಮಹೋದಯರುಗಳು, ವಿರೋಧ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರನ್ನು ಭೇಟಿ ಮಾಡಿ ಅವರ ಸಹಕಾರ ಅಭಯವನ್ನು ಪಡೆದಿದ್ದೇವೆ. ಈ ಎರೆಡೂ ತಿಂಗಳುಗಳಲ್ಲಿ ನಮ್ಮ ರಾಜ್ಯದ ಪದಾಧಿಕಾರಿಗಳು ವಿವಿಧ ತಂಡಗಳಲ್ಲಿ ರಾಜ್ಯದಲ್ಲಿ ಪ್ರವಾಸಮಾಡಿ ಜಿಲ್ಲಾ ಸಂಸ್ಥೆಗಳ ಮೂಲಕ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಲು ನಮ್ಮ ಸಂಸ್ಥೆಯ ತಂಡದ ನಾಯಕರುಗಳು ಸಹಕಾರ ನೀಡುತ್ತಿದ್ದಾರೆ.

ಜುಲೈ 4 ರಂದು ಈ ಹಿಂದೆ ರಾಜ್ಯ ಮುಖ್ಯ ಆಯುಕ್ತರಾಗಿ ವಿಶಿಷ್ಟ ಸೇವೆಸಲ್ಲಿಸಿದ್ದ ಮೇಜರ್ ವೈ.ವಿ.ಕೆ. ಮೂರ್ತಿ ಅವರ ಜನ್ಮದಿನೋತ್ಸವವನ್ನು ಬೆಂಗಳೂರಿನ ಕೇಂದ್ರ ಕಛೇರಿ ಶಾಂತಿಗೃಹದಲ್ಲಿ ಆಚರಿಸಲಾಯಿತು. ವೈ.ವಿ.ಕೆ. ಮೂರ್ತಿ ಅವರು 1943 ರಿಂದ 1949ರ ವರೆಗೆ ಮೈಸೂರು ರಾಜ್ಯದ ಸ್ಕೌಟ್ಸ್ ಅಸೋಸಿಯೇಷನ್‌ನ ಮುಖ್ಯ ಆಯುಕ್ತರಾಗಿ ಕಾರ್ಯನಿರ್ವಹಿಸಿದ್ದರು. ದಿನಾಂಕ 4ರಂದು ಆಚರಿಸಿದ ಕಾರ್ಯಕ್ರಮದಲ್ಲಿ ಅವರ ಬಂದುಗಳೂ, ಮೊಮ್ಮಕ್ಕಳು, ಮರಿಮೊಮ್ಮಕಳು ಹಾಗೂ ಕುಟುಂಬ ವರ್ಗದವರು ಪಾಲ್ಗೊಂಡಿದ್ದರು. ಈ ಕಾರ್ಯಕ್ರಮ ಹೃದಯ ಸ್ಪರ್ಶಿಯಾಗಿತ್ತು. ಇದೇ ವರ್ಷದಿಂದ ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಸೇವೆ ಸಲ್ಲಿಸಿದ ಹಿಂದಿನ ಎಲ್ಲಾ ದಿವಂಗತ ರಾಜ್ಯ ಮುಖ್ಯ ಆಯುಕ್ತರುಗಳ ಜನ್ಮ ದಿನೋತ್ಸವವನ್ನು ಆಚರಿಸುವ ಸಂಪ್ರದಾಯ ಆರಂಭಿಸಲಾಗಿದೆ.

ಈ ತಿಂಗಳ 16ರಂದು ಸ್ಕೌಟ್-ಗೈಡ್ ಚಳವಳಿಯಲ್ಲಿ ಭಾರತದ ರಾಷ್ಟ್ರೀಯ ಆಯುಕ್ತರಾಗಿ, ರಾಜ್ಯದ ಮುಖ್ಯ ಆಯುಕ್ತರಾಗಿ, ಜಿಲ್ಲಾ ಆಯುಕ್ತರಾಗಿ ಬೆಂಗಳೂರು ನಗರದ ಪ್ರಥಮ ಉಪಮೇಯರ್ ಹಾಗೂ ಮೇಯರ್ ಸ್ಥಾನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದ, ವಿಧಾನ ಪರಿಷತ್ತು ಹಾಗು ವಿಧಾನ ಸಭೆಗಳ ಗೌರವಾನ್ವಿತ ಸದಸ್ಯರಾಗಿ, ಆರು ದಶಕಗಳಿಗೂ ಹೆಚ್ಚುಕಾಲ ಸಾರ್ವಜನಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ದಿ. ವಿ.ಪಿ. ದೀನದಯಾಳು ನಾಯ್ಡು ಅವರ 98ನೇ ಜನ್ಮದಿನೋತ್ಸವವನ್ನು ಬೆಂಗಳೂರಿನ ದಕ್ಷಿಣ ಜಿಲ್ಲಾಸಂಸ್ಥೆ ಹಾಗೂ ರಾಜ್ಯ ಸಂಸ್ಥೆ ಜಂಟಿಯಾಗಿ ಬೆಂಗಳೂರಿನ ಸುದ್ದುಗುಂಟೆಪಾಳ್ಯದಲ್ಲಿರುವ ಕ್ರೈಸ್ಟ್ ಶಾಲೆಯಲ್ಲಿ ಆಚರಿಸಲು ತೀರ್ಮಾನಿಸಿದ್ದೇವೆ. ಈ ಕಾರ್ಯಕ್ರಮದಲ್ಲಿ ಕರ್ನಾಟಕದ ಸಾಲಿಗೆ ಇಲಾಖೆ ಸಚಿವರೂ ಹಾಗು ಬೆಂಗಳೂರು ನಗರ ಜಿಲ್ಲೆ ಉಸ್ತುವಾರಿ ಸಚಿವರಾದ ಶ್ರೀ ರಾಮಲಿಂಗಾರೆಡ್ಡಿ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಕೆ.ಎಸ್.ಸತ್ಯಮೂರ್ತಿ, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ದಯ್ಯ ಹಾಗು ದಿ.ದೀನದಯಾಳು ನಾಯ್ಡು ಅವರ ಪುತ್ರರೂ ರಾಜ್ಯ ಸಂಸ್ಥೆಯ ಸಹಾಯಕ ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಡಿ.ವೆಂಕಟೇಶ್, ಬೆಂಗಳೂರುದಕ್ಷಿಣಜಿಲ್ಲಾ ಶಿಕ್ಷಣ ಇಲಾಖೆಯ ಉಪನಿರ್ದೇಶಕರು, ಕ್ರೈಸ್ಟ್ ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರು ಹಾಗು ಬೆಂಗಳೂರು ದಕ್ಷಿಣ ಜಿಲ್ಲಾಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸುತ್ತಾರೆ.

23ನೇ ಅಂತರಾಷ್ಟ್ರೀಯ ಜಾಂಬೋರಿ ಜಪಾನ್ ದೇಶದಲ್ಲಿ ಜರುಗುತ್ತಿದೆ, ಈ ಜಾಂಬೋರಿಯಲ್ಲಿ ನಮ್ಮ ರಾಜ್ಯದಿಂದ 44ಜನ ಸ್ಕೌಟ್ಸ್ / ಗೈಡ್ಸ್ / ಸ್ಕೌಟರ್ಸ್ / ಗೈಡರ್ಸ್‌ಗಳು ಭಾಗವಹಿಸಿದ್ದಾರೆ. ಇದು ಸಂತೋಷದ ವಿಷಯ. ನಾವೆಲ್ಲರೂ ಇವರುಗಳಿಗೆ ಸುಖ ಪ್ರಯಾಣವನ್ನು ಬಯಸೋಣ. ಈ ವರ್ಷದಲ್ಲಿ ಬರುವ ಮೂರು ತಿಂಗಳು ಬಹಳ ಅಮೂಲ್ಯವಾದ ತಿಂಗಳು. ಒಬ್ಬರಿಂದ ಏನೂ ಮಾಡಲು ಸಾಧ್ಯವಿಲ್ಲ. ಎಲ್ಲರೂ ಸೇರಿದರೆ ಮಾತ್ರ ನಮ್ಮ ಸ್ಕೌಟಿಂಗ್ ಮತ್ತು ಗೈಡಿಂಗ್ ಚಳವಳಿಯು ಯಶಸ್ವಿಗೊಳಿಸಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ನಾವೆಲ್ಲರೂ ಕಾರ್ಯಪ್ರವೃತ್ತರಾಗೋಣ. ರಾಜ್ಯದ ಎಲ್ಲಾ ಸ್ಥಳೀಯ ಸಂಸ್ಥೆಯ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕಳೆದ ಸಂಚಿಕೆಯಲ್ಲಿ ಪ್ರಕಟಿಸಿರುವ 2015-16ನೇ ಸಾಲಿನ ಕ್ರಿಯಾ ಯೋಜನೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸಿರಿ. ನಮ್ಮ ಮಕ್ಕಳಿಗೆ ಚಿಕ್ಕಂದಿನಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸುವುದು ಅತಿ ಅಗತ್ಯ. 'ಅಗಸ್ತ್ಯ' ಸಂಸ್ಥೆ ರಾಷ್ಟ್ರ ಮಟ್ಟದಲ್ಲಿ ವಿಶಿಷ್ಠ ರೀತಿಯಲ್ಲಿ ಮಕ್ಕಳಿಗೆ ವಿಜ್ಞಾನ ಪರಿಸರ ಪ್ರಜ್ಞೆ ಬೆಳೆಸಲು ಪ್ರಯತ್ನಿಸುತ್ತಿದ್ದಾರೆ. ಇದನ್ನು ಮಾಜಿ ರಾಷ್ಟ್ರಪತಿಗಳಾದ ದಿ|| ಅಬ್ದುಲ್ ಕಲಾಂ ರವರು ಮೆಚ್ಚಿ, ಪ್ರೋತ್ಸಾಹಿಸಿದ್ದಾರೆ. ಇದನ್ನು ತಿಳಿಯಲು ಪಕ್ಕದ ಆಂಧ್ರ ಪ್ರದೇಶದ ಕುಪ್ಪಂನಲ್ಲಿ 'ಅಗಸ್ತ್ಯ' ಸಂಸ್ಥೆಯ ವಿಜ್ಞಾನ ಕೇಂದ್ರಕ್ಕೆ ನಾವು ಈ ವಾರದಲ್ಲಿ ಭೇಟಿ ಮಾಡುವವರಿದ್ದೇವೆ. ಇದರ ಬಗ್ಗೆ ಮುಂದಿನ ಸಂಚಿಕೆಯಲ್ಲಿ ತಿಳಿಸುತ್ತೇನೆ .

ದಿನಾಂಕ 27 ಜುಲೈ 2015ರಂದು ಭಾರತ ರತ್ನ ಡಾ|| ಎ.ಪಿ.ಜೆ.ಅಬ್ದುಲ್ ಕಲಾಂ, ಮಾಜಿ ರಾಷ್ಟ್ರಪತಿಗಳು, ಇವರ ನಿಧನ ನಮ್ಮೆಲ್ಲರನ್ನು ದುಃಖದಲ್ಲಿ ಮುಳುಗಿಸಿದೆ. ಅವರ ದೇಹ ನಮ್ಮೊಡನೆ ಇಲ್ಲ. ಆದರೆ, ಅವರು ಬಯಸಿದ ಬಲಿಷ್ಠ ಭಾರತ, ಯುವ ಶಕ್ತಿಯ ಸಂಘಟನೆ, ವಿದ್ಯಾರ್ಥಿಗಳ ಮೇಲೆ ಅವರಿಗಿದ್ದ ಪ್ರೇಮ, ಚಿರಸ್ಥಾಯವಾಗಿ ಉಳಿಯುವ ಮೌಲ್ಯಗಳು ನಮ್ಮ ಜೊತೆಗಿದೆ. ಈ ಚಳವಳಿಯನ್ನು ಬೆಳೆಸುವುದೇ ಡಾ|| ಎ.ಪಿ.ಜಿ. ಅಬ್ದುಲ್ ಕಲಾಂ ಅವರಿಗೆ ನಾವು ಸಲ್ಲಿಸುವ ಗೌರವವೆಂದು ಭಾವಿಸಿ ನನ್ನ ಅನಿಸಿಕೆಗಳನ್ನು ಮುಗಿಸುತ್ತೇನೆ. ಮತ್ತೆ ಭೇಟಿ ಮಾಡುತ್ತೇನೆ.

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ಕಾರ್ಯದರ್ಶಿಗಳ ನುಡಿ . . .

**Dream is not what you see in sleep. dream is some thing that does not let you sleep**

(ಕನಸೆಂದರೆ ನೀವು ನಿದ್ರಿಸುವಾಗ ಕಾಣುವಂಥದದ್ದಲ್ಲ. ಕನಸೆನ್ನುವುದು ನಿಮ್ಮನ್ನು ನಿದ್ರಿಸಲು ಬಿಡದೆ ಕಾಡುವಂಥಹದ್ದು)

– ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ
ಮಾಜಿ ರಾಷ್ಟ್ರಪತಿಗಳು

ತಮಿಳುನಾಡಿನ ರಾಮೇಶ್ವರಂನಲ್ಲಿ ದಿನಪತ್ರಿಕೆ ಹಂಚುತ್ತಿದ್ದ ಹುಡುಗನೊಬ್ಬ ರಾಷ್ಟ್ರಪತಿಯಾದ ಸಂಗತಿ ನಿಮ್ಮೆಲ್ಲರಿಗೂ ಗೊತ್ತಿದೆ. ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ತಮ್ಮ ಎಂಭತ್ತಮೂರರ ಇಳಿವಯಸ್ಸಿನಲ್ಲಿ ನಮ್ಮನ್ನು ಅಗಲಿದ್ದಾರೆ. ದೇಶದಲ್ಲಿ ಕ್ಷಿಪಣಿ ತಂತ್ರಜ್ಞಾನ ರೂವಾರಿ ಕಲಾಂ, ಮಾಜಿ ರಾಷ್ಟ್ರಪತಿಯಾದ ನಂತರವೂ ತಂತ್ರಜ್ಞಾನ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಾ; ಶಾಲಾ ವಿದ್ಯಾರ್ಥಿಗಳೊಂದಿಗೆ ಸಂವಾದಿಸುತ್ತಿದ್ದ ಕಲಾಂ. ಅವರು ಸಂವೇದನಾಶೀಲ ಪ್ರತಿಭಾವಂತ ದಿಗ್ಗಜರು. ಅವರು ವಿದ್ಯಾರ್ಥಿಗಳನ್ನು ಪೈಲೆಟ್‌ಗಳಾಗಿ, ವೈದ್ಯರಾಗಿ, ಎಂಜಿನಿಯರ್‌ಗಳಾಗಿ ವಿಜ್ಞಾನಿಗಳಾಗಿ ಎಂದು ಪ್ರೋತ್ಸಾಹಿಸುತ್ತಿದ್ದರಂತೆ. ಭವ್ಯ ಭಾರತದ ಅಭಿವೃದ್ಧಿ ಕುರಿತಂತೆ ಕನಸು ಕಂಡು ಅದು ನನಸಾಗಲು ಶ್ರಮಿಸಿ ಎಂದು ಸಲಹೆಮಾಡುತ್ತಿದ್ದಾರು. ಒಂದು ಸಂವಾದದಲ್ಲಿ ವಿದ್ಯಾರ್ಥಿಯೊಬ್ಬ ಕಲಾಂ ಅವರನ್ನು ಕೇಳಿದನಂತೆ "ನೀವೇಕೆ ಉತ್ತಮ ರೈತನಾಗುವ ಕನಸು ಕಾಣಿ" ಎಂದು ಹೇಳುತ್ತಿಲ್ಲ ಎಂದು ಪ್ರಶ್ನಿಸಿದಾಗ ಅವರು ನಿಬ್ಬೆರಗಾದರಂತೆ. ಅದಕ್ಕವರು ನೀನು ನಿಜಕ್ಕೂ ಭಾರತೀಯರ ಸುಪುತ್ರ ಎಂದು ಹೊಗಳಿದರಂತೆ.

ಭಾರತೀಯರಿಗೆ ನಿಜವಾದ ಕನಸ್ಸಿನ ಅರ್ಥ ತಿಳಿಸಿ.., ಆ ಕನಸುಗಳ ಬೆನ್ನ ಬಿದ್ದು ಸಾಧನೆಯ ಗುರಿಯತ್ತ ಹೆಜ್ಜೆಹಾಕುವ ಪಾಠಹೇಳಿಕೊಟ್ಟ ಮಹಾನ್ ಸಾಧಕ ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ. ಆಗಾಗ್ಗೆ ಡಾ॥ ಕಲಾಂ ಅವರ ಮಾತುಗಳನ್ನು ಸ್ಮರಿಸುತ್ತಲೇ ಇರುತ್ತೇನೆ. ಮನುಷ್ಯನ ಬದುಕಿನಲ್ಲಿ ಕಷ್ಟಗಳಿರಬೇಕು, ಇಲ್ಲವಾದರೆ ಯಶಸ್ಸನ್ನು ನಿಜವಾಗಿಯೂ ಆಸ್ವಾಧಿಸಲು ಸಾದ್ಯವಾಗುವುದಿಲ್ಲವಂತೆ. ನೀವು ಸೂರ್ಯನಂತೆ ಶಕ್ತಿಯ ಕೇಂದ್ರ ಬಿಂದು ಹಾಗೂ ಅವನಂತೆ ಬೆಳಕು ನೀಡಲು ಸಾಧ್ಯವಾಗ ಬೇಕಾದರೆ, ಬೆಂಕಿಯಲ್ಲಿ ಬೆಂದು ಬೇಯುವ ಪ್ರಕ್ರಿಯಲ್ಲಿ ಪಾಲ್ಗೊಳ್ಳಬೇಕೆಂತೆ; ಕಲಾಂ ಅವರ ಈ ಮಾತುಗಳು ನಮಗೆ ಸ್ಪೂರ್ತಿ ತುಂಬುವಂತೆ ಇವೆ. ಅವರು ಬೆಂಗಳೂರಿಗೆ ಬಂದು ವಿಧಾನ ಸಭೆಯ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಮಾತನಾಡಿ ಸಂದರ್ಭಕ್ಕೆ ನಾನು ಸಾಕ್ಷಿಯಾಗಿದ್ದೆ. ಅವರು ಭಾರತದ ಅಭಿವೃದ್ಧಿ ಮುನ್ನೋಟ ಕುರಿತಂತೆ "ವಿಷನ್ 2010" ವರದಿ ನಿಜಕ್ಕೂ ಮಾದರಿಯಾಗಿದೆ.

ಕರ್ನಾಟಕದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕಾರ್ಯದರ್ಶಿಯಾಗಿ, ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ತರಬೇತಿ ಶಿಬಿರ ಕೇಂದ್ರಕ್ಕೆ ಭೇಟಿ ನೀಡಿದ ಆರಂಭದಲ್ಲಿಯೇ ದೂರದೃಷ್ಠಿಯ ಯೋಜನೆಯೊಂದು ಹೊಳೆಯಿತು. ಸುಮಾರು ನೂರು ಎಕರೆ ವಿಸ್ತೀರ್ಣದಲ್ಲಿರುವ ಈ ಆವರಣದಲ್ಲಿ ಗಿಡ ಮರಗಳ ನಡುವೆ ಶಿಬಿರ ಕೇಂದ್ರದ ಕೆಲ ಕಟ್ಟಡಗಳಿವೆ. ಈ ಆವರಣದಲ್ಲಿ ಅರಣ್ಯ ಇಲಾಖೆ ಹಾಗೂ ತೋಟಗಾರಿಕಾ ಇಲಾಖೆಯ ನೆರವಿನಿಂದ ಯೋಜನಾಬದ್ಧವಾಗಿ ಮರ ಗಿಡಗಳನ್ನು ನೆಡಲು ಉದ್ದೇಶಿಸಲಾಗಿದೆ. ಈ ಮೂಲಕ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ ಹಸಿರು ಪರಿಸರ ಸ್ನೇಹಿಯಾಗಲಿದೆ. ಅನೇಕ ಹಕ್ಕಿ ಪಕ್ಷಿಗಳ ನೆಚ್ಚಿನ ತಾಣವಾಗಲಿದೆ. ಇದೇ ರೀತಿ ಈ ಆವರಣದಲ್ಲಿ ಮಳೆನೀರು ಕೊಯ್ಲು ಯೋಜನೆಯನ್ನು ಜಾರಿಗೊಳಿಸುತ್ತಿದ್ದೇವೆ. ಈ ಮೂಲಕ ಅಂತರ್ ಜಲ ಸಮೃದ್ಧಿಯಾಗಲಿದೆ.

ಈಗ ಬೆಂಗಳೂರಿನ ಕೇಂದ್ರ ಕಛೇರಿಯ ಶಾಂತಿಗೃಹದ ಆವರಣದಲ್ಲಿ ನೂತನ ಕಟ್ಟಡಗಳು ಬರಲಿವೆ. ಈ ಆವರಣದಲ್ಲಿಯೂ ಯೋಜನಾ ಬದ್ಧವಾಗಿ ಮಳೆನೀರು ಕೊಯ್ಲು ಜಾರಿಗೆ ತರುವ ಆಲೋಚನೆ ಇದೆ. ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುವತ್ತಮೂರು ಜಿಲ್ಲೆಗಳ ಕೆಲ ಜಿಲ್ಲಾ ಕೇಂದ್ರಗಳಲ್ಲಿಯೂ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸೇರಿದ ಕಟ್ಟಡಗಳು ಮತ್ತು ಖಾಲಿ ಇರುವ ಭೂಮಿ ಇದೆ. ಹೀಗೆ ಖಾಲಿ ಇರುವ ಭೂಮಿಯಲ್ಲಿ ಸ್ಥಳೀಯ ಅರಣ್ಯ ಇಲಾಖೆ ಮತ್ತು ತೋಟಗಾರಿಕಾ ಇಲಾಖೆಯ ನೆರವಿನೊಂದಿಗೆ ಗಿಡ ಮರ ನೆಡಲು ಸೂಚಿಸಲಾಗಿದೆ. ಕೇವಲ ಕಡತಗಳಲ್ಲಿ ತಲೆ ಹುದುಗಿಸಿಕೊಂಡು ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಳ್ಳದೆ ಕಾರ್ಯನಿರ್ವಹಿಸುತ್ತಾ ಹೋದರೆ, ಸರ್ವತೋಮುಖ ಅಭಿವೃದ್ಧಿ ಸಾಧ್ಯವಾಗುವುದಿಲ್ಲ. ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್‌ನ ಚಳವಳಿಯಲ್ಲಿರುವ ವಿದ್ಯಾರ್ಥಿಗಳು ಮತ್ತು ತರಬೇತಿ ಶಿಕ್ಷಕರು ಕೇವಲ ಪಠ್ಯೇತರ ಚಟುವಟಿಕೆಯಾಗಿ ಚಳವಳಿಯಲ್ಲಿ ಪಾಲ್ಗೊಳುವುದಕಿಂತ ಹಸಿರು ಗಿಡ ಮರಗಳ ಜೊತೆ ಪ್ರಕೃತಿಯ ಒಂದು ಭಾಗವಾಗಬೇಕು ಎಂಬುದು ನಮ್ಮ ಆಶಯ. ಇನ್ನು ಮುಂದೆ ದಾವಣಗೆರೆಯ ಕೊಂಡಜ್ಜಿಯಲ್ಲಿರುವ ತರಬೇತಿ ಶಿಬಿರ ಕೇಂದ್ರ ಮತ್ತು ದೊಡ್ಡಬಳ್ಳಾಪುರದಲ್ಲಿರುವ ತರಬೇತಿ ಶಿಬಿರ ಕೇಂದ್ರಗಳು ಸೇರಿದಂತೆ ಜಿಲ್ಲಾವಾರು ನಮ್ಮ ಸ್ಕೌಟ್ ಮತ್ತು ಗೈಡ್ ಕಛೇರಿ ಆವರಣ ಹಸಿರು ಪರಿಸರ ಸ್ನೇಹಿಯಾಗಿ, ಶಿಬಿರ ಕೇಂದ್ರಕ್ಕೆ ಬರುವ ವಿದ್ಯಾರ್ಥಿಗಳು ಪ್ರಕೃತಿಯ ಸೌಂದರ್ಯ ಸವಿಯಬಹುದೆಂದು ಆಶಿಸುತ್ತೇನೆ.

ಸ್ಕೌಟ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ
ಸಿದ್ದಯ್ಯ
ರಾಜ್ಯ ಕಾರ್ಯದರ್ಶಿ

**ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರಗಳು :**

I) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯಮಟ್ಟದ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್ ಪರೀಕ್ಷಾ ಶಿಬಿರ ಜೂನ್ ತಿಂಗಳ 11 ರಿಂದ 15, 2015ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಗಿತ್ತು.

ಮೇಲ್ಕಂಡ ಕಾರ್ಯಕ್ರಮದ ಉದ್ಘಾಟನಾ ಸಮಾರಂಭ ಜೂನ್ 6, 2015ರಂದು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀರಾಮಶೇಷಶೆಟ್ಟಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶಿಬಿರವನ್ನು ಉದ್ಘಾಟಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸಂತೋಷ್ ಕುಮಾರ್ ಕದ್ರಿ ಇವರು ಉಪಸ್ಥಿತರಿದರು. ರಾಜ್ಯ ಸಂಸ್ಥೆಯಿಂದ ಪರೀಕ್ಷಕರಾಗಿ ಆಗಮಿಸಿದ ಶ್ರೀ ಶರಾಫ್ ಮಾದಪ್ಪ ಚಾಮರಾಜನಗರ, ಶ್ರೀ ವಿ.ಎಂ. ರಾಮಚಂದ್ರ ಮೈಸೂರು, ಶ್ರೀ ಪಿ. ಮಂಜುನಾಥಪ್ಪ ಬಳ್ಳಾರಿ, ಶ್ರೀ ಟಿ.ಸಿ. ಗಂಗಾಧರ, ತುಮಕೂರು ಇವರುಗಳು ವೇದಿಕೆಯಲ್ಲಿದ್ದರು. ಶ್ರೀ ಎಂ. ಪ್ರಭಾಕರ್ ಭಟ್ ಸ್ವಾಗತಿಸಿದರು. ಶ್ರೀ ಎಂ.ಜೆ. ಕಜೆ ವಂದಿಸಿದರು. ಶಿಬಿರದ ನೇತೃತ್ವವನ್ನು ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ವಹಿಸಿದ್ದರು.

ಶಿಬಿರ ಸಮಾರೋಪ ಸಮಾರಂಭ ದಿನಾಂಕ 14-06-2015ರಂದು ಶ್ರೀ ಎನ್.ಜಿ. ಮೋಹನ್ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಪರಿಸರ ವಾದಿಗಳೂ, ಲೇಖಕರೂ ಆಗಿರುವ ಶ್ರೀ ಅಡ್ಡೂರ ಕೃಷ್ಣರಾವ್ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಪರಿಸರದ ಬಗ್ಗೆ ಬಹಳಷ್ಟು ಕಾಳಜಿ ವಹಿಸಬೇಕು. ಪ್ರತಿಯೊಬ್ಬರು ಗಿಡಗಳ್ನು ನೆಟ್ಟು ಪೋಷಿಸಬೇಕು. ಇಲ್ಲವಾದಲ್ಲಿ ಮುಂದಿನ ದಿನಗಳಲ್ಲಿ ಶುದ್ಧ ಆಮ್ಲಜನಕ ಸಿಗುವುದು ಕಷ್ಟವಾಗಬಹುದು ಎಂದು ತಿಳಿಸಿದರು ಹಾಗೂ ವಿದ್ಯಾರ್ಥಿಗಳಿಗೆ ತಮ್ಮದೇ ಗುರಿ ಇರಬೇಕು. ಆ ಗುರಿ ಕಡೆ ಸಾಗಲು ಸತತ ಪರಿಶ್ರಮವಿರಬೇಕೆಂದು ತಿಳಿಸಿದರು. ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು ಮಾತನಾಡಿ ವಿದ್ಯಾರ್ಥಿಗಳಲ್ಲಿ ಶಿಸ್ತು, ದೇಶಪ್ರೇಮ, ಸಹಕಾರ ಗುಣಗಳನ್ನು ಬೆಳೆಸಲು ಸ್ಕೌಟಿಂಗ್-ಗೈಡಿಂಗ್ ಚಟುವಟಿಕೆಗಳು ಸಹಕಾರಿಯಾಗಿದೆ. ಶಿಬಿರದ ನಾಯಕರಾದ ಶ್ರೀ ಶರಾಫ್ ಮಾದಪ್ಪ ಶಿಬಿರದ ವರದಿ ನೀಡಿದರು. ಶ್ರೀ ತ್ಯಾಗಂ, ಸ್ಕೌಟರ್ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಎಂ.ಜಿ. ಕಜೆ ವಂದಿಸಿದರು. ಶ್ರೀ ಐತಪ್ಪ ಪೂಜಾರಿ ಕಾರ್ಯಕ್ರಮ ನಿರೂಪಿಸಿದರು.

ದಕ್ಷಿಣ ಕನ್ನಡ, ಉಡುಪಿ, ಕೊಡಗು, ಶಿವಮೊಗ್ಗ, ಶಿರಸಿ ಶೈಕ್ಷಣಿಕ ಜಿಲ್ಲೆಗಳಿಂದ 180 ಸ್ಕೌಟ್ಸ್, 24 ಸ್ಕೌಟ್ ಶಿಕ್ಷಕರು, 8 ಸೇವಾ ರೋವರ್ಸ್, 8 ಪರೀಕ್ಷಕರು ಹಾಗೂ ಸಹಾಯಕರೊಂದಿಗೆ ಒಟ್ಟು 228 ಅಭ್ಯರ್ಥಿಗಳು ಶಿಬಿರದಲ್ಲಿ ಭಾಗವಹಿಸಿದ್ದರು. ಶಿಬಿರದಲ್ಲಿ ಸ್ಕೌಟ್ ಪ್ರತಿಜ್ಞೆ, ನಿಯಮ, ವಂದನೆ, ಧ್ವಜಗಳು, ಪಯನಿಯರಿಂಗ್, ಮ್ಯಾಪಿಂಗ್, ಎಸ್ಟಿಮೇಷನ್, ಪ್ರಥಮ ಚಿಕಿತ್ಸೆ, ಪ್ರಾವೀಣ್ಯತಾ ಪದಕಗಳ ಬಗ್ಗೆ ಪರೀಕ್ಷೆಗಳನ್ನು ಏರ್ಪಡಿಸಲಾಯಿತು. ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಶಿಬಿರದಲ್ಲಿ ಏರ್ಪಡಿಸಲಾಯಿತು. ಶಿಬಿರದಲ್ಲಿ ಸ್ಕೌಟರ್ ಭಾಸ್ಕರ್, ಜಾರ್ಜ್ ರೋವರ್ ನಾಯಕ ಶ್ರೀ ಎ.ಎಮ್, ಪ್ರತಿಮ್ ಕುಮಾರ್ ಊಟ ಉಪಹಾರ ಮತ್ತು ಇತರ ವ್ಯವಸ್ಥೆಯ ಬಗ್ಗೆ ಸಹಕರಿಸಿದರು.

II) ದಿನಾಂಕ: 16.06.2015 ರಿಂದ 20.06.2015ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ

ಜಿಲ್ಲೆಯಲ್ಲಿ ರಾಜ್ಯಮಟ್ಟದ ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ರಾಜ್ಯದ 13 ಜಿಲ್ಲೆಗಳಿಂದ 467 ಸ್ಕೌಟ್ಸ್, 69 ಸ್ಕೌಟರ್ಸ್, 13 ಸಿಬ್ಬಂದಿ, ಸೇವಾ ಸ್ಕೌಟ್ಸ್ 02 ಮತ್ತು 390 ಗೈಡ್ಸ್, 46 ಗೈಡ್ ಕ್ಯಾಪ್ಟನ್, 14 ಸಿಬ್ಬಂದಿ, ಒಟ್ಟು 1001 ಸ್ಕೌಟ್ಸ್ / ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ: 16.06.2015ರಂದು ಸಂಜೆ 5.00 ಗಂಟೆಗೆ ಉದ್ಘಾಟನಾ ಸಮಾರಂಭಕ್ಕೆ ದಾವಣಗೆರೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಶ್ರೀ ಮಹಮದ್ ವಾಸಿಲ್, ಅಧ್ಯಕ್ಷರು, ದಾವಣಗೆರೆ ಜಿಲ್ಲಾ ಸಂಸ್ಥೆ, ಶ್ರೀ ಹೆಚ್. ಮಂಜುನಾಥ್, ಉಪನಿರ್ದೇಶಕರು (ಅಭಿವೃದ್ಧಿ) ದಾವಣಗೆರೆ, ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಸುರೇಖಾ ಚಿಗಟೇರಿ, ಶ್ರೀಮತಿ ವರ್ಷಾ ಚಿಗಟೇರಿಯವರು ಉಪಸ್ಥಿತರಿದ್ದು, ಮಕ್ಕಳನ್ನು ಉದ್ದೇಶಿಸಿ ಮಾತನಾಡಿದರು. ಶ್ರೀಮತಿ ಮಂಜುಳ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್) ಸ್ವಾಗತಿಸಿದರು. ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ವಂದಿಸಿದರು.

ಶಿಬಿರದ ಸಮನ್ವಯಾಧಿಕಾರಿಗಳಾಗಿ ಶ್ರೀ ಕೊಗ್ಗಗಾಣಿಗ, ಶ್ರೀ ಪಿ.ಮಂಜುನಾಥಪ್ಪ, ಶ್ರೀ ಶ್ರೀಕಂಠಮೂರ್ತಿ, ಶ್ರೀಮತಿ ಕಾಮೇಶ್ವರಿ, ಶ್ರೀಮತಿ ಬಸಮ್ಮ, ಶ್ರೀಮತಿ ಲಕ್ಷ್ಮಿಮಂಗಿ, ಶ್ರೀಮತಿ ವಜ್ರಗಂಗಮ್ಮ ರವರು ಕಾರ್ಯನಿರ್ವಹಿಸಿದರು. ಶಿಬಿರದಲ್ಲಿ ಸ್ಕೌಟ್ಸ್ / ಗೈಡ್ಸ್ ಪ್ರತಿಜ್ಞೆ, ನಿಯಮ, ವಂದನೆ, ಧ್ವಜಗಳು, ಪಯನರಿಂಗ್, ಮ್ಯಾಪಿಂಗ್, ಎಸ್ಟಿಮೇಷನ್, ಪ್ರಥಮ ಚಿಕಿತ್ಸೆ, ಪ್ರಾವೀಣತಾ ಪದಕಗಳು ಮತ್ತು ಪ್ರಶ್ನೆ ಪತ್ರಿಕೆಗಳನ್ನು ಕೊಟ್ಟು ಉತ್ತರವನ್ನು ಬರೆಸಿಕೊಳ್ಳಲಾಯಿತು. ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ದಿನಾಂಕ: 20.06.2015ರಂದು ಮಧ್ಯಾಹ್ನ ಧ್ವಜ ಅವರೋಹಣದೊಂದಿಗೆ ಶಿಬಿರ ಮುಕ್ತಾಯವಾಯಿತು. ಶಿಬಿರದ ಮೇಲುಸ್ತುವಾರಿಯನ್ನು ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀಮತಿ ಮಂಜುಳ ವಹಿಸಿದ್ದರು.

**ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ರೋವರ್ಸ್ ಮತ್ತು ರೇಂಜರ್ಸ್‌ಗಳ ನಿಪುಣ್ ಪರೀಕ್ಷಾ ಶಿಬಿರ-ಕೊಂಡಜ್ಜಿ.**

ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ದಿ: 16 ರಿಂದ 20.06.2015ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿ ರಾಜ್ಯ ಪುರಸ್ಕಾರ ರೋವರ್ಸ್ ಮತ್ತು ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ರಾಜ್ಯದ 8 ಜಿಲ್ಲೆಗಳಿಂದ 64 ರೋವರ್ಸ್ ಮತ್ತು 56 ರೇಂಜರ್ಸ್‌ಗಳು ಭಾಗವಹಿಸಿದ್ದರು.

ಶಿಬಿರದ ಸಂಯೋಜಕರಾಗಿ ಶ್ರೀ ಎ.ಎಂ.ಶಂಕರ್, ಎಲ್‌ಟಿ(ಆರ್) ಮತ್ತು ಶ್ರೀಮತಿ ಎನ್.ಕೆ.ಛಾಯ, ರವರು ಕೆಲಸ ನಿರ್ವಹಿಸಿದರು. ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀಮತಿ ಮಂಜುಳ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್)ರವರ ಶಿಬಿರದ ಮೇಲ್ವಿಚಾರಕರಾಗಿದ್ದರು.

ಶಿಬಿರದಲ್ಲಿ ಪ್ರವೇಶದಿಂದ ತೃತೀಯ ಸೋಪಾನದ ವಿಷಯಗಳು, ಪ್ರಶ್ನೆ ಪತ್ರಿಕೆ ಕೊಟ್ಟು ಉತ್ತರ ಬರೆಸಿಕೊಳ್ಳಲಾಯಿತು. 1000 ಗಿಡಗಳನ್ನು ಕೊಂಡಜ್ಜಿ ಶಿಬಿರದಲ್ಲಿ ನೆಡಲಾಯಿತು. ರಾತ್ರಿ **Over Night** ಹೈಕ್ ಮಾಡಿ ಬೆಳಗ್ಗೆ ವಾಪಾಸ್ಸು ಶಿಬಿರಕ್ಕೆ ಬರಲಾಯಿತು. ಕ್ಯಾಂಪ್ ಕ್ರಾಫ್ಟ್, ಪ್ರಥಮ ಚಿಕಿತ್ಸೆ, ಮ್ಯಾಪಿಂಗ್ ರ‍್ಯಾಂಬೆಲರ್ ಪದಕ, ಪ್ರಾವೀಣತಾ ಪದಕ, ಲಾಗ್‌ಪುಸ್ತಕಗಳನ್ನು ತಪಾಸಣೆ ಮಾಡಲಾಯಿತು. ಶ್ರೀ ಸಿ.ಎಸ್.ವಿಶ್ವನಾಥ್ ಮತ್ತು ಶ್ರೀ ಎಸ್.ಎನ್.ಗೋಪಾಲಕೃಷ್ಣ ರವರು ಸಿಬ್ಬಂದಿಯಾಗಿ ಕಾರ್ಯ ನೆರವೇರಿಸಿದರು.

**III)** ದಿನಾಂಕ : 26.06.2015 ರಿಂದ 30.06.2015 ರವರೆಗೆ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್ ಗಳ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು.

ರಾಜ್ಯದ 10 ಜಿಲ್ಲೆಗಳಿಂದ 495 ಸ್ಕೌಟ್ಸ್, 35 ಸ್ಕೌಟರ್ಸ್, 20 ಸಿಬ್ಬಂದಿ ಮತ್ತು 368 ಗೈಡ್ಸ್, 45 ಗೈಡರ್ಸ್ 12 ಸಿಬ್ಬಂದಿ ಒಟ್ಟು 975 ಜನ ಭಾಗವಹಿಸಿದ್ದರು. ಶಿಬಿರದಲ್ಲಿ ಶ್ರೀ.ಎಂ.ಕೆ. ಖಾನ್, ALT(S), ಶ್ರೀ ಎಂ.ಜಿ. ಕಜೆ, ALT(S), ಶ್ರೀ ಬಿ. ಆನಂದ ಅಡಿಗ, LT(S), ಶ್ರೀ ಟಿ.ಕೆ ನಾರಾಯ ಣ ಸ್ವಾಮಿ, LT(S), ಶ್ರೀ ಜಗದೀಶ ಬೋಳಸೂರ, ALT(S), ಶ್ರೀ ಶಿವಶಂಕರಪ್ಪ, ALT(S) ರವರು ಗುಂಪುಗಳಿಗೆ ಸಮನ್ವಯಾಧಿಕಾರಿಗಳಾಗಿ ಮತ್ತು 14 ಜನ ಸಿಬ್ಬಂದಿಗಳು ಕೆಲಸ ನಿರ್ವಹಿಸಿದರು.

ಶಿಬಿರದಲ್ಲಿ ಸ್ಕೌಟ್ಸ್ ಪ್ರತಿಜ್ಞೆ, ನಿಯಮ, ವಂದನೆ, ಹಸ್ತಲಾಘವ, ಗುರುತು, ಪ್ರಾರ್ಥನಾಗೀತೆ, ಧ್ವಜಗೀತೆ, ರಾಷ್ಟ್ರಗೀತೆ, ಧ್ವಜಗಳು, ಪಯನಿಯರಿಂಗ್, ಮ್ಯಾಪಿಂಗ್, ಎಸ್ಟಿಮೇಷನ್, ಪ್ರಥಮ ಚಿಕಿತ್ಸೆ, ಪ್ರಾವೀಣತಾ ಪದಕಗಳು ಮತ್ತು ಪ್ರಶ್ನೆಪತ್ರಿಕೆ ಕೊಟ್ಟು ಉತ್ತರವನ್ನು ಬರೆಸಿಕೊಳ್ಳಲಾಯಿತು. ಸರ್ವಧರ್ಮ ಪ್ರಾರ್ಥನೆ, ಭವ್ಯ ಶಿಬಿರಾಗ್ನಿಯನ್ನು ಏರ್ಪಡಿಸಲಾಗಿತ್ತು. ಶ್ರೀ ಎಸ್. ಓಮೇಶ್ವರಯ್ಯ, LT(S)ರವರು ಊಟ, ತಿಂಡಿ ,ವ್ಯವಸ್ಥೆ ಮಾಡಿದ್ದರು ಶಿಬಿರಾರ್ಥಿಗಳಿಂದ ಸ್ವಚ್ಛ ಭಾರತ್ ಕಾರ್ಯಕ್ರಮದಡಿ ಶಿಬಿರವನ್ನು ಸ್ವಚ್ಛಮಾಡಿಸಲಾಯಿತು.

ದಿನಾಂಕ 30.6.2015ರ ಮಧ್ಯಾಹ್ನ ಧ್ವಜ ಅವರೋಹಣದೊಂದಿಗೆ ಶಿಬಿರವು ಮುಕ್ತಾಯವಾಯಿತು. ಶಿಬಿರದ ಮೇಲುಸ್ತುವಾರಿಯನ್ನು ರಾಜ್ಯ ಸಂಘಟನಾ ಆಯುಕ್ತರುಗಳಾದ, ಶ್ರೀ ಟಿ.ಎ. ಮಂಜುನಾಥಾಚಾರ್ LT(S) ಮತ್ತು ಶ್ರೀಮತಿ ಸಿ. ಮಂಜುಳಾ ವಹಿಸಿದ್ದರು.

IV) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ: 03 ರಿಂದ 07.07.2015 ಕಲಬುರಗಿ ವಿಭಾಗದ 4 ಜಿಲ್ಲೆಗಳ(ಬೀದರ್, ಕಲಬರಗಿ, ಯಾದಗಿರಿ, ರಾಯಚೂರು) ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಶ್ರೀ ಗುರು ವಿದ್ಯಾಪೀಠ ವಸತಿ ಶಾಲೆ, ಖಣದಾಳ, ಕಲಬುರಗಿಯಲ್ಲಿ ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರವನ್ನ ಏರ್ಪಡಿಸಲಾಗಿತ್ತು.

ಈ ಶಿಬಿರದಲ್ಲಿ 196 ಸ್ಕೌಟ್ಸ್, 21 ಸ್ಕೌಟ್ ಮಾಸ್ಟರ್, 5 ಸಿಬ್ಬಂದಿ ಮತ್ತು 162 ಗೈಡ್ಸ್, 20 ಗೈಡರ್ಸ್, 8 ಸಿಬ್ಬಂದಿ ಒಟ್ಟು 412 ಜನ ಭಾಗವಹಿಸಿದ್ದರು. ದಿನಾಂಕ 03.07.2015 ರಂದು ಬೆಳಗ್ಗೆ 9 ಗಂಟೆಗೆ ನೊಂದಣಿ ಹಾಗೂ ಮಧ್ಯಾಹ್ನ2 ಗಂಟೆಗೆ ಧ್ವಜಾರೋಹಣದೊಂದಿಗೆ, ಶಿಬಿರಾರ್ಥಿಗಳಿಗೆ ಪರೀಕ್ಷಕರನ್ನ ಶ್ರೀ.ಟಿ.ಎ. ಮಂಜುನಾಥಾಚಾರ್ SOC(S) ರವರು ಪರಿಚಯ ಮಾಡಿದರು,ದೈನಂದಿನ ಚಟುವಟಿಕೆ,ಶಿಬಿರದ ನಿಯಮ, ಶಿಬಿರಾರ್ಥಿಗಳಿಗೆ ಗುಂಪುಗಳ ವಿಂಗಡಣೆ ಮಾಡಲಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ 108 ವರ್ಷಗಳ ಸುದೀರ್ಘ ಇತಿಹಾಸ ಹೊಂದಿದೆ. ಪ್ರಪಂಚದಾದ್ಯಂತ ಅನೇಕ ದೇಶಗಳಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಸೇರಿರುವುದರಿಂದ ವಿದ್ಯಾರ್ಥಿಗಳಲ್ಲಿ ಆತ್ಮಬಲ,ಸ್ಥೈರ್ಯ, ದೇಶಭಕ್ತಿ ಮೂಡುತ್ತದೆ ಎಂದು ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರಭಾರಿ ಡಿಡಿಪಿಐ ಶರಣಪ್ಪ ಕೋಬಾಳಕರ ತಿಳಿಸಿದರು. ನಗರದ ಶ್ರೀ ಗುರು ವಿದ್ಯಾಪೀಠ ಖಣದಾಳದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ಹಮ್ಮಿಕೊಂಡಿದ್ದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರವನ್ನು ಉದ್ಘಾಟಿಸಿ ಮಾತನಾಡಿದರು. ಶಿಬಿರದಲ್ಲಿ ಕಲಬುರಗಿ, ಬೀದರ, ರಾಯಚೂರು ಹಾಗೂ ಯಾದಗಿರಿ ಜಿಲ್ಲೆಗಳ 412 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಬೀದರನ ಫರಾನ್ ಶಿಕ್ಷಣ ಸಂಸ್ಥೆ ಅಧ್ಯಕ್ಷ ಅಬ್ದುಲ್ ಖದೀರ್ ಸಾಬ್,ರಾಜ್ಯ ದಸಂಸ ಸಂಚಾಲಕ ಡಾ। ಡಿ.ಜಿ ಸಾಗರ, ಶ್ರೀಮತಿ ಪ್ರಮೀಳಬಾಯಿ ದಿಗ್ಗಾವಿ ಮಕ್ಕಳಿಗೆ ಸ್ಕೌಟ್ಸ್ ಹಾಗೂ ಗೈಡ್ಸ್ ಬಗ್ಗೆ ಮಾಹಿತಿ ನೀಡಿದರು. ರಾಜ್ಯ ಸಹಾಯಕ ಆಯುಕ್ತ ಕೆ.ತಿಮ್ಮಯ್ಯ, ಡಾ। ಶೀಲಾ ಸಿದ್ದರಾಮು, ಕಮಲಾದೇವಿ ಚಿಕ್ಕಮಠ, ಜಯಶ್ರೀ ಸಿ. ಗೋಗಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಶಿಬಿರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ಸಮವಸ್ತ್ರ, ಪ್ರತಿಜ್ಞೆ, ನಿಯಮ, ವಂದನೆ, ದ್ಯೇಯವಾಕ್ಯ, ಎಡಗೈ ಹಸ್ತಲಾಘವ, ಸ್ಕೌಟ್ಸ್/ಗೈಡ್ಸ್, ಗುರುತು, ಪ್ರಾರ್ಥನಾಗೀತೆ, ಧ್ವಜಗೀತೆ, ರಾಷ್ಟ್ರಗೀತೆ, ಧ್ವಜಗಳು, ಮ್ಯಾಪಿಂಗ್ ಪಯೋನಿಯರಿಂಗ್, ಕ್ಯಾಂಪಿಂಗ್, ಪ್ರಥಮ ಚಿಕಿತ್ಸೆ, ಎಸ್ಟಿಮೇಷನ್, ಸರ್ವಧರ್ಮ ಪ್ರಾರ್ಥನೆ, ಪ್ರಶ್ನೆಪತ್ರಿಕೆ ಕೊಟ್ಟು ಉತ್ತರ ಪಡೆಯಲಾಯಿತು.

ದಿನಾಂಕ 06.04.2015 ರಂದು ಮದ್ಯಾಹ್ನ 3.30ಕ್ಕೆ ಸಮಾರೋಪ ಸಮಾರಂಭವನ್ನ ಏರ್ಪಡಿಸಲಾಗಿತ್ತು ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಉಪೇಂದ್ರಪಾಟೀಲ್ ಆಡಳಿತಾದಿಕಾರಿಗಳು, ಶ್ರೀ ಗುರು ವಿದ್ಯಾಪೀಠ ವಸತಿ ಶಾಲೆ

ಖಣದಾಳ್, ಇವರು ವಹಿಸಿದ್ದರು ಮುಖ್ಯ ಅತಿಥಿಗಳಾಗಿ ಶ್ರೀ ಭರತರಾಜ ಸಾವಳಾಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಬುರ್ಗಿ ಉತ್ತರ ವಲಯ ಇವರು ಮಕ್ಕಳನ್ನು ಉದ್ದೇಶಿಸಿ ಮಾತನಾಡಿದರು.

ಶ್ರೀಮತಿ ಜಾನಕಿ ವೇಣುಗೋಪಾಲ್, ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು ಮತ್ತು ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು(ಕಾರ್ಯಕ್ರಮ) ಇವರು ಮಾತನಾಡುತ್ತ ಸ್ಕೌಟ್ ಮತ್ತು ಗೈಡ್ ಗಳಾಗಲು ಏನೇನು ಮಾಡಬೇಕು, ಉತ್ತಮ ಸತ್ಪ್ರಜೆಯಾಗುವಂತೆ ಕರೆನೀಡಿದರು, ಶಿಕ್ಷಣ ಇಲಾಖೆಯ ಜೊತೆ ಒಳ್ಳೆಯ ಸಂಬಂಧವಿರಬೇಕೆಂದು ತಿಳಿಸಿದರು. ನಂತರ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್) ಶ್ರೀ ಟಿ.ಎ. ಮಂಜುನಾಥಾಚಾರ್ ರವರು ಮಾತನಾಡುತ್ತಾ 2015–16ನೇ ಸಾಲಿನಲ್ಲಿ 4 ರಾಜ್ಯಪುರಾಸ್ಕಾರ ಸ್ಕೌಟ್ಸ್/ಗೈಡ್ಸ್‌ಗಳ ಪರೀಕ್ಷಾ ಶಿಬಿರವನ್ನ ಈಗಾಗಲೆ ವಿವಿದ ಭಾಗಗಳಲ್ಲಿ ನಡೆಸಲಾಗಿದೆ, ಈ ಶಿಬಿರವು ಕೊನೆಯದಾಗಿದ್ದು. ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರ ಆದೇಶದಂತೆ ಕಲಬುರ್ಗಿ ವಿಭಾಗದ ಮಕ್ಕಳಿಗೆ ಶ್ರೀ ಗುರು ವಿದ್ಯಾಪೀಠ ವಸತಿ ಶಾಲೆಯಲ್ಲಿ ಏರ್ಪಡಿಸಲಾಗಿದೆ. ವಸತಿಶಾಲೆಯವರು ಊಟ, ವಸತಿ, ಶೌಚಾಲಯದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಿರುತ್ತಾರೆ. ಈ ವಸತಿ ಶಾಲೆಯಲ್ಲಿ ಪ್ರೀ ಪ್ರೈಮರಿ ಶಾಲೆಯಿಂದ ಪಿ.ಯು.ಸಿ ಯವರಗೆ ಬಾಲಕ/ಬಾಲಕಿಯರು ಓದುತ್ತಿದ್ದು (ವಸತಿ ಶಾಲೆಯಲ್ಲಿ ವಾಸವಿರುವುದರಿಂದ) ಇಂತಹವರು 'ಬನ್ನಿ' ಕಬ್–ಬುಲ್ ಬುಲ್–ಸ್ಕೌಟ್ಸ್–ಗೈಡ್ಸ್ ಮತ್ತು ರೋವರ್/ರೇಂಜರ್ ತಂಡಗಳನ್ನು ಪ್ರಾಂಭಿಸಲು ಆಢಳಿತಾಧಿಕಾರಿಗಳನ್ನ ವಿನಂತಿಸಿದರು. ಪ್ರಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ.ಚನ್ನವೀರಯ್ಯ ಸ್ವಾಮಿಯವರು ಸ್ವಾಗತಿಸಿದರು, ಶ್ರೀ ವೀರಭದ್ರಯ್ಯ ಎಡೆಹಳ್ಳಿ,ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌಟ್ಸ್) ರವರ ವಂದನಾರ್ಪಣೆಯೊಂದಿಗೆ ಸಮಾರಂಭವು ಮುಕ್ತಾಯವಾಯಿತು.

ದಿನಾಂಕ 07.07.2015 ಬೆಳಗ್ಗೆ ಸರ್ವಧರ್ಮ ಪ್ರಾರ್ಥನಾ7.30 ಕ್ಕೆ ಧ್ವಜಾರೋಹಣ, ಉಪಹಾರದ ನಂತರ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ರಾಷ್ಟ್ರಪತಿ ಸ್ಕೌಟ್‌ಗಳ ವಿಷಯಗಳ ಬಗ್ಗೆ ತಿಳಿಸಿದರು, ಶ್ರೀ.ವಿ.ಎಂ. ರಾಮಚಂದ್ರ, **LT(S)** ರವರು "ಫ್ರೀಬಿಯಿಂಗ್ ಮಿ" ಶ್ರೀ ಶರಾಫ್ ಮಾದಪ್ಪ "ಸ್ವಚ್ಛ ಭಾರತ್" ಶ್ರೀ ಜಗದೀಶ್ ಬೋಳ ಸೂರ್, "ಮೆಸೆಂಜರ್ ಆಫ್ ಪೀಸ್" ಬಗ್ಗೆ ತಿಳಿಸಿದರು, ನಂತರ ವಸತಿ ಶಾಲೆಯ ಎಲ್ಲಾ ಆವರಣವನ್ನ ಸ್ವಚ್ಛಗೊಳಿಸಲಾಯಿತು, 12 ಗಂಟೆಗೆ ಸ್ಕೌಟ್ಸ್/ಗೈಡ್ಸ್‌ಗಳಿಗೆ ಮುಕ್ತ ಅಧಿವೇಶನ ನಡೆಸಿ ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಸ್ಕೌಟ್ಸ್ ಗಳಾಗಲು ಮಕ್ಕಳಲ್ಲಿದ್ದ ಸಂಶಯಗಳನ್ನು ನಿವಾರಣೆ ಮಾಡಲಾಯಿತು, 2 ಗಂಟೆಗೆ ಧ್ವಜ ಅವರೋಹಣದೊಂದಿಗೆ ಶಿಬಿರವು ಮುಕ್ತಾಯವಾಯಿತು.

## ಅಭಿನಂದನೆಗಳು

ಚಿತ್ರದುರ್ಗ ಜಿಲ್ಲೆ ಶ್ರೀ ಮುರುಘರಾಜೇಂದ್ರ ಸ್ಕೌಟ್ ಮುಕ್ತದಳದ ಸ್ಕೌಟ್‌ಗಳಾದ ಚಿ॥ ರಾಹುಲ್ ಟಿ.ಎನ್. ಹಾಗೂ ಅಮೋಘ ಟಿ.ಆರ್. ರಾಷ್ಟ್ರಪತಿ ಸ್ಕೌಟ್ ಪದಕಗಳನ್ನು ಪಡೆದಿದ್ದು ಇವರು ಇತ್ತೀಚಿನ ದ್ವಿತೀಯ ಪಿ.ಯು.ಸಿ. ವಿಜ್ಞಾನ ವಿಭಾಗದ ಪರೀಕ್ಷೆಯಲ್ಲಿ ಶೇ 92 (ರಾಹುಲ್ ಟಿ.ಎನ್.) ಹಾಗೂ 90.20 (ಅಮೋಘ ಟಿ.ಆರ್.) ಉನ್ನತಶ್ರೇಣಿ ಅಂಕಗಳನ್ನು ಗಳಿಸಿರುತ್ತಾರೆ. ಸ್ಕೌಟ್ಸ್–ಗೈಡ್ಸ್ ವತಿಯಿಂದ ಇವರಿಗೆ ಅಭಿನಂದನೆಗಳು.


ರಾಹುಲ್ ಟಿ.ಎನ್.




ಅಮೋಘ ಟಿ.ಆರ್.

## ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಕೊಂಡಜ್ಜಿಯಲ್ಲಿ ನಡೆದ ರಾಜ್ಯಮಟ್ಟದ ತರಬೇತಿ ಶಿಬಿರಗಳು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ರಾಜ್ಯಮಟ್ಟದ ಮೂಲ ರೋವರ್ ಲೀಡರ್ಸ್‌ಗಳ ತರಬೇತಿ, ಮುಂದುವರಿದ ರೋವರ್ ಲೀಡರ್ಸ್‌ಗಳ ತರಬೇತಿ ಮುಂದುವರಿದ ಸ್ಕೌಟ್ಸ್ ಮಾಸ್ಟರ್ಸ್‌ಗಳ ತರಬೇತಿ ಹಾಗೂ ರಾಜ್ಯಮಟ್ಟದ ಪಯನರಿಂಗ್ ತರಬೇತಿಗಳನ್ನು ದಿನಾಂಕ 22-6-2015 ರಿಂದ 28-6-2015 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರಕೇಂದ್ರ ಕೊಂಡಜ್ಜಿಯಲ್ಲಿ ನಡೆಸಲಾಯಿತು. ಶಿಬಿರದ ವಿವರ ಈ ಕೆಳಕಂಡಂತೆ ಇದೆ.

| ಕ್ರ.ಸಂ. | ತರಬೇತಿ ವಿವರ | ಭಾಗವಹಿಸಿದವರ ಸಂಖ್ಯೆ | ನಾಯಕರು ಮತ್ತು ಸಿಬ್ಬಂದಿ ವರ್ಗ |
|---|---|---|---|
| 1. | ಮೂಲ ರೋವರ್<br>ಸ್ಕೌಟ್ ಲೀಡರ್ಸ್‌ಗಳ ತರಬೇತಿ ಶಿಬಿರ<br>ದಿ: 22-06-2015 ರಿಂದ 20-08-2015 | 33 | ಶ್ರೀ ಎ.ಎನ್. ನರೇಂದ್ರ ಕುಮಾರ್,<br>ಶಿಬಿರದ ನಾಯಕರು<br>ಶ್ರೀ ಬಿ. ಗಣೇಶ್, ಹೆಚ್.ಡಬ್ಲ್ಯೂ.ಬಿ.<br>ಶ್ರೀ ಅಶೋಕ್ ಕುಮಾರ್:<br>ಶ್ರೀ ಎಲ್.ಟಿ. ಲೋಕೇಶ್ |
| 2. | ಮೂಲ ರೋವರ್ ಸ್ಕೌಟ್ ಲೀಡರ್ಸ್‌ಗಳ ತರಬೇತಿ<br>ದಿ: 22-06-2015 ರಿಂದ 20-08-2015 | 32 | ಶ್ರೀ ಸದಾಶಿವಂ ಎ.ಎಲ್.ಟಿ<br>ಶ್ರೀ ಬಾಲಕೃಷ್ಣ, ಹೆಚ್.ಡಬ್ಲ್ಯೂ.ಬಿ. |
| 3. | ರೋವರ್ ಸ್ಕೌಟ್ ಲೀಡರ್ಸ್‌ಗಳ ಮುಂದುವರಿದ ತರಬೇತಿ ಶಿಬಿರ | 15 | ಶ್ರೀ ಎ.ಎಂ. ಶಂಕರ್, ಎಲ್.ಟಿ.(ರೋವರ್)<br>ಶ್ರೀ ಗಣಪತಿ ಪ್ರಿ. ಎ.ಎಲ್.ಟಿ.<br>ಶ್ರೀ ರಂಗಸ್ವಾಮಿ, ಹೆಚ್.ಡಬ್ಲ್ಯೂ.ಬಿ.<br>ಶ್ರೀ ಶರಾಪ್‌ಮಾದಪ್ಪ, ಎಲ್.ಟಿ.(ಎಸ್) |
| 4. | ಸ್ಕೌಟ್ ಮಾಸ್ಟರ್ಸ್‌ಗಳ ಮುಂದುವರಿದ ತರಬೇತಿ ಶಿಬಿರ-1 | 32 | ಶ್ರೀ ಕೊಗ್ಗ ಗಾಣಿಗ ಎಲ್.ಟಿ.(ಎಸ್.)<br>ಶ್ರೀ ಪಿ. ಮಂಜುನಾಥಪ್ಪ ಎ.ಎಲ್.ಟಿ.(ಸ್ಕೌ)<br>ಶ್ರೀ ಜೆ.ಎಸ್. ವಿಜಯ್, ಎ.ಎಲ್.ಟಿ.(ಸ್ಕೌ) |
| 5. | ಸ್ಕೌಟ್ ಮಾಸ್ಟರ್ಸ್‌ಗಳ ಮುಂದುವರಿದ ತರಬೇತಿ ಶಿಬಿರ-2 | 30 | ಶ್ರೀ ವಿ.ಎಂ. ರಾಮಚಂದ್ರ, ಎಲ್.ಟಿ.(ಎಸ್)<br>ಶ್ರೀ ಶಿವಣ್ಣ, ಎ.ಎಲ್.ಟಿ.(ಎಸ್)<br>ಶ್ರೀಹೆಚ್.ಎಂ.ರಾಜಶೇಖರ್ ಎ.ಎಲ್.ಟಿ.(ಎಸ್) |
| 6. | ಪಯೋನರಿಂಗ್ ಮತ್ತು ಎಸ್ಟಿಮೇಷನ್ ತರಬೇತಿ ಶಿಬಿರ<br>ದಿ: 24-6-2015 ರಿಂದ 28-6-2015<br>(ಸ್ಕೌಟ್-ಗೈಡ್ ಕಾಮನ್ ಕೋರ್ಸ್) | 28 | ಶ್ರೀ ಜಿಮ್ಮಿ ಸಿಕ್ವೇರಿಯಾ ಎಲ್.ಟಿ.(ಎಸ್)<br>ಶ್ರೀ ಬಿ.ಕೆ. ಪಾಟೀಲ್, ಎಲ್.ಟಿ.(ಸ್ಕೌ)<br>ಶ್ರೀ ಸಿ.ಎನ್. ಮಹೇಶ್, ಎ.ಎಲ್.ಟಿ.(ಸ್ಕೌ) |

ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಮೇಲ್ಕಂಡ ಶಿಬಿರಗಳ ಮೇಲ್ವಿಚಾರಕರಾಗಿದ್ದರು.

ದಿನಾಂಕ : 22-06-2015 ರಂದು ಸಂಜೆ 4.00 ಗಂಟೆಗೆ ಶಿಬಿರದ ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀಮತಿ ಸುಮನ್ ಲತಾ ಅರೋರಾ, ಎ.ಎಲ್.ಟಿ.(ರೇಂಜರ್) ರಾಷ್ಟ್ರೀಯ ಜಂಟಿ ನಿರ್ದೇಶಕರು (ಗೈಡ್ಸ್) ನವದೆಹಲಿ ಇವರು ಸಸಿಗಳಿಗೆ ನೀರು ಹಾಕುವುದರ ಮೂಲಕ ಉದ್ಘಾಟನೆಯನ್ನು ನೆರವೇರಿಸಿ ಮಾತನಾಡುತ್ತಾ ಈ ಶಿಬಿರದಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಶಿಬಿರಾರ್ಥಿಗಳು ಆಗಮಿಸಿದ್ದುದನ್ನು ಕಂಡು ಪ್ರಶಂಶಿಸಿದರು. ಮತ್ತು ತರಬೇತಿಯು ಮುಗಿದ ನಂತರ ಶಾಲಾ ಕಾಲೇಜುಗಳಲ್ಲಿ ಮಕ್ಕಳಿಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಗತಿಪರ ಶಿಕ್ಷಣವನ್ನು ನೀಡುವಂತೆ ಶಿಕ್ಷಣಾರ್ಥಿಗಳಿಗೆ ತಿಳಿಸಿದರು. ಮತ್ತು ರಾಷ್ಟ್ರೀಯ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಹೆಚ್ಚು ಕ್ರಿಯಾಶೀಲರಾಗಿ ಭಾಗವಹಿಸಬೇಕೆಂದು ಸೂಚಿಸಿದರು. ಸಮಾರಂಭದಲ್ಲಿ ಶ್ರೀಮತಿ ಬಿ.ವಿ. ರಾಮಲತ ವಿವಿಧ ತರಬೇತಿ ನಾಯಕರು ಮತ್ತು ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು. ಶ್ರೀಮತಿ ಎನ್.ಕೆ. ಛಾಯಾ, ಎಲ್.ಟಿ.(ಗೈ) ಉಪಸ್ಥಿತರಿದ್ದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಪ್ರಸ್ತಾವನೆ ನುಡಿಗಳನ್ನು ನುಡಿದು ಸರ್ವರನ್ನು ಸ್ವಾಗತಿಸಿದರು. ಶ್ರೀಮತಿ ಕೆ.ವಿ. ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ಎಲ್ಲರಿಗೂ ವಂದನೆ ಸಲ್ಲಿಸಿದರು.

ಶಿಬಿರದಲ್ಲಿ ತರಬೇತಿಯು ದಿನನಿತ್ಯದ ಶಿಬಿರದ ನಿಯಮಾವಳಿಯಂತೆ ನಾಯಕರುಗಳು ನೆರವೇರಿಸಿದರು. ಶಿಬಿರದಲ್ಲಿ ದಿನಾಂಕ 25 ಮತ್ತು 26 ರಂದು ಶ್ರೀ ಶರಾಫ್ ಮಾದಪ್ಪರವರ ನೇತೃತ್ವದಲ್ಲಿ ಯೋಗ ತರಬೇತಿಯನ್ನು ನೀಡಲಾಯಿತು ಮತ್ತು ಶಿಬಿರಾರ್ಥಿಗಳಿಂದ ಕೊಂಡಜ್ಜಿ ಶಿಬಿರ ಕೇಂದ್ರದಲ್ಲಿ ಕೋರ್ಸ್ ಪ್ರಕಾರ ಗಿಡ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ದಿನಾಂಕ 28-06-2015 ರಂದು ಬೆಳಿಗ್ಗೆ 5.30 ಕ್ಕೆ ಸಮಾರೋಪ ಸಮಾರಂಭವು ಶ್ರೀಯುತ ಚೆನ್ನಸ್ವಾಮಿ ರೆಡ್ಡಿ ಎಲ್.ಟಿ.(ಸ್ಕೌಟ್) ಮತ್ತು ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶಿಬಿರದ ಶಿಬಿರಾರ್ಥಿಗಳಿಂದ ಪ್ರತೀ ಶಿಬಿರಗಳಿಂದ ಸ್ಕೌಟರ್ಸ್‌ಗಳು ಶಿಬಿರದ ಅನುಭವವನ್ನು ಹಂಚಿಕೊಂಡರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಇವರ ನೇತೃತ್ವದಲ್ಲಿ ನಡೆಸಲಾಯಿತು. ದಿ:28-6-2015 ಮಧ್ಯಾಹ್ನ 1.00 ಗಂಟೆಗೆ ಧ್ವಜ ಅವರೋಹಣದೊಂದಿಗೆ ಶಿಬಿರವು ಮುಕ್ತಾಯವಾಯಿತು.

## Report of "Free Being Me" Programme Conducted at Kondajji Basappa Scout s& Guides Training Centre, Kondajji

The 'Free Being Me' Programme was conducted by Miss Kriti Chandwani, ROC (G), Southern Region at Kondajji Basappa Scout & Guide Training Centre on 25th of June, 2015 in presence of Shri LT. Lokesh, STC(S), Karnataka State. 107 members participated in the said event from the on going training courses in the camp site from 22nd June to 28th June, 2015.

Total number of participants ; 104

1. Advanced course for Scout Master: 62
2. Pioneering Course (combined for Scout Masters &Guide Captain) : 27
3. Staff Members : 15

Miss Kriti Chandwani was able to cover almost all the aspects of Free Being Me in the one hour programme which was quite effective and was able to seek much attention from the participants. Shri L.T. Lokesh, STC(S) coordinated the programme and translated Free Being Me Programme in Kannada language to make the participants comfortable. Programme Activity Card and brochures were distributed at the end of the programme. The Participants really appreciated and showed their interest in the programme. It was informed to all the participants to conduct the activity in their respective units.

# ರಾಜ್ಯ ಕೇಂದ್ರ ಕಚೇರಿಯಲ್ಲಿ ದಿನಾಂಕ 4 ಜುಲೈ 2015ರಂದು ಏರ್ಪಡಿಸಿದ್ದ ಮೇಜರ್ ವೈ.ವಿ.ಕೆ. ಮೂರ್ತಿ ಅವರ ಜನ್ಮದಿನೋತ್ಸವ ಆಚರಣೆ



"ಕರ್ನಾಟಕ ರಾಜ್ಯ ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಅದ್ಭುತವಾದ ಪರಂಪರೆ ಹಾಗೂ ಇತಿಹಾಸವಿದೆ". ಈ ಮಾತನ್ನು ಹೇಳಿದವರು ಬೇರೆ ಯಾರೂ ಅಲ್ಲ! ಮೈಸೂರು ರಾಜ್ಯದ ಸ್ಕೌಟ್ ಅಸೋಷಿಯೇಷನ್ ಸಂಸ್ಥೆಯಲ್ಲಿ 1943 ರಿಂದ 1949ರವರೆಗೆ ಮುಖ್ಯ ಆಯುಕ್ತರಾಗಿದ್ದ ದಿವಂಗತ ವೈ.ವಿ.ಕೆ.ಮೂರ್ತಿ ಅವರ ಬಂಧುಗಳಾದ ಶ್ರೀ ಮಾಧವಸ್ವಾಮಿ ಅವರು. ಕಳೆದ ತಿಂಗಳ ಮೊದಲವಾರ ಸ್ಕೌಟ್ಸ್ ಮತ್ತು ಗೈಡ್ಸ್‌ನ ಬೆಂಗಳೂರಿನ ಕೇಂದ್ರ ಕಛೇರಿ ಶಾಂತಿಗೃಹದಲ್ಲಿ ಅವಿಸ್ಮರಣೀಯ ಕಾರ್ಯಕ್ರಮ ಏರ್ಪಾಡಾಗಿತ್ತು. 1943 ರಿಂದ 1949ರವರೆಗೆ ಮೈಸೂರು ರಾಜ್ಯ ಸ್ಕೌಟ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾಗಿದ್ದ ವೈ.ವಿ.ಕೆ.ಮೂರ್ತಿಅವರ ಜನ್ಮದಿನೋತ್ಸವವನ್ನು ಆಚರಿಸಲಾಯಿತು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್.ಸಿಂಧ್ಯ ಅವರು ಹಾಗೂ ಪದಾಧಿಕಾರಿಗಳಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಎಂ.ಎ.ಖಾಲಿದ್, ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀ ಆರ್.ಚಂದ್ರಶೇಖರನ್ ಮತ್ತು ಶ್ರೀ ಎಂ.ಎ. ಚೆಲ್ಲಯ್ಯ, ರಾಜ್ಯ ಸಂಸ್ಥೆಯ ನೌಕರವರ್ಗದವರುಗಳು ಉಪಸ್ಥಿತಿಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ವೈ.ವಿ.ಕೆ.ಮೂರ್ತಿ ಅವರ ಬಂಧುಗಳಾದ ಶ್ರೀ ಮಾಧವಸ್ವಾಮಿ, ಅವರ ಮೊಮ್ಮಗ ಶ್ರೀ ಸತ್ಯಮೂರ್ತಿ ಅವರ ಪತ್ನಿ ಶ್ರೀಮತಿ ಲತಾ ಮೂರ್ತಿ ಸೇರಿದಂತೆ ಮರಿಮೊಮ್ಮಕ್ಕಳು ಭಾಗವಹಿಸಿದ್ದರು. "ನಾನೂ ಕೂಡ ಸ್ಕೌಟ್, ನನ್ನ ಮುತ್ತಾತ ಕೂಡ ಸ್ಕೌಟ್ ಆಯುಕ್ತರಾಗಿದ್ದರು ಎಂಬುದು ನನಗೆ ಹೆಮ್ಮೆ" ಎಂದು ಅವರ ಮೊಮ್ಮಗ ವೈ.ವಿ.ಕೆ. ಮೂರ್ತಿ ಅವರನ್ನು ಹೆಮ್ಮೆಯಿಂದ ಸ್ಮರಿಸಿದರು.

ವೈ.ವಿ.ಕೆ.ಮೂರ್ತಿ ಅವರು ಜನಿಸಿದ್ದು ದೇಶದಲ್ಲಿ ಸ್ವಾತಂತ್ರ್ಯ ಚಳವಳಿಗೆ ಪೂರಕವಾಗಿ ಘಟನೆಗಳು ನಡೆಯುತ್ತಿದ್ದ 1886ರ ಜುಲೈ 4 ರಂದು. ಅಂದಿನ ಕಾಲಕ್ಕೆ ಅವರು ಜನಪ್ರಿಯ ವೈದ್ಯರಾಗಿದ್ದರು. ಮೊದಲನೇ ಮಹಾಯುದ್ಧದ ಸಂದರ್ಭದಲ್ಲಿ ಗಾಯಾಳುಗಳ ಚಿಕಿತ್ಸೆಯಲ್ಲಿ ಸಕ್ರಿಯರಾಗಿದ್ದ ವೈ.ವಿ.ಕೆ.ಮೂರ್ತಿ ಅಂದಿನ ಬ್ರಿಟಿಷ್ ಮಹಾರಾಜ ಜಾರ್ಜ್-IV ಅವರ ದೈಹಿಕ ಆರೋಗ್ಯದ ಸಲಹೆಗಾರರಾಗಿ ಕಾರ್ಯನಿರ್ವಹಿಸಿದ್ದರು. ಬೆಂಗಳೂರಿನ ಬಳೆಪೇಟೆಯಲ್ಲಿ "ಗಿರಿ ಕ್ಲಿನಿಕ್" ಸ್ಥಾಪಿಸಿ ಉಚಿತ ವೈದ್ಯಕೀಯ ಸೇವೆಯನ್ನು ಸಾರ್ವಜನಿಕರಿಗೆ ನೀಡುತ್ತಿದ್ದರು. ಬೆಂಗಳುರಿನಲ್ಲಿ ಅನೇಕ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿದ ಹೆಗ್ಗಳಿಕೆ ವೈ.ವಿ.ಕೆ. ಮೂರ್ತಿಅವರಿಗೆ ಸಲ್ಲುತ್ತದೆ. ಇಂದು ರಾಜ್ಯದ ಪ್ರತಿಷ್ಠಿತ ಸಂಸ್ಥೆಯಾಗಿರುವ ರಾಜ್ಯ ಕ್ರಿಕೆಟ್ ಸಂಸ್ಥೆಯನ್ನು 1933ರಲ್ಲಿ ಆರಂಭಿಸಿದ ಒಬ್ಬರಲ್ಲಿ ಮೂರ್ತಿ ಒಬ್ಬರು ಎನ್ನುವುದು ಅವರ ಸಾರ್ವಜನಿಕ ವ್ಯಕ್ತಿತ್ವ ಎಂಥಹದ್ದು ಎಂಬುದನ್ನು ಸಾಬೀತುಪಡಿಸುತ್ತದೆ.

# Inaugural address delivered by His Excellency Dr. A.P.J. Abdul Kalam, President of India at the 15th National Jamboree of the Bharat Scouts and Guides held at Haridwar Uttarkhand on October 16, 2005.



**Mission for Bharat Scouts and Guides**

I am delighted to be with the members of the Bharat Scouts and Guides on the occasion of National Jamboree. My greetings to the professionals, Volunteers, Rovers, Rangers, Scouts and Guides and other distinguished guests. Bharat Scouts and Guides has grown to a strength of over 38 lakhs in India. Bharat Scouts and Guides units are spread from Leh in the Himalayas to Kanyakumari in the Tamil Nadu, from Kutch in the West, to Kohima in the East, including our Islands. During railway accidents Scouts are the first people who reach the accident spot and provide relief to the victims. What a noble mission? Now I would like to talk on the topic "Missions for Bharat Scouts and Guides".

As you are all aware, the country is poised in the mission of transforming, itself into a developed nation by the year 2020. The prime resource through which this transformation is possible is the 540 million youth who are below the age of 25. India needs young citizens with knowledge, hard work and love for the nation and above all a disciplined citizen with value system. Mission rightly fits in the evolution of enlightened citizens needed for developed India mission.

Considering the contribution made by this trained and disciplined youth force of Bharat Scouts and Guides, I would like to share with you the role that this organization can play in the development of enlightened citizens for our national missions.

**My Visualization of Bharat Scouts and Guides**

Presently, at any time nearly 3 lakh Bharat Scouts and Guides cadets are undergoing training either in school or college. This is a very small percentage of the eligible student population of the country. Dynamics of nation with a billion population is becoming complex day by day. Every year 10 million educated youth are injected into the society who are looking for employment opportunities. They need productive employment; otherwise instability in the society will set in.

The independence movement created the leadership quality and nurtured the concept that the nation is bigger than individual or any system of organization. During the last few decades this national spirit has been at the low ebb. What we need is that the political parties have to compete with each other, and answer the question, "How the nation can be developed faster, in quality and work for providing higher standards of life for our citizens?" For this trend to set in, the youth, particularly the disciplined youth should make an important contribution. Enhancing the scope of Bharat Scouts and Guides and making it mission oriented, will be the best answer today for the mission of National Development. This disciplined society will have an impact on the political ethos of the nation. In the present scenario, one thing we have seen, our Armed Forces consistently have played a disciplined role for preserving the integrity of the nation in tune with

the political vision. The new role of Bharat Scouts and Guides in assisting India's new vision will also be able to demonstrate that the government can utilize the power of the youth together for the national development cutting across the political and geographical barriers.

Bharat Scouts and Guides cadets in schools and colleges get their basic training for nearly two years with inculcation of discipline and integrity as the prime pillars. I understand Bharat Scouts and Guides has grown from 3 lakh in the year 1950 to 38 lakh now.

I am confident, if at least 10 lakh trained Bharat Scouts and Guides cadets are injected into our society with a mission every year, it will have a positive impact on three important areas of life in the society since every scout makes a promise to do his or her duty to God, to his or her duty to God, to his or her country and to help the people.

(a) Promotion of righteous life in the work place and the family and elimination of corruption and improvement of efficiency.

(b) Augmentation of clean environment, clean home, clean office and clean neighbourhood including planting of lakhs of trees.

(c) Disciplined and committed action in whatever works the Bharat Scouts and Guides cadet takes up for enthusiastic partnership in the developed India movement.

**Righteous Homes**

When I was in Bangalore, I interacted with the students of the Indian Institute of Science. During my lecture, I said that if a country is to be corruption free and become a nation of beautiful minds, there are three key societal members who can make a difference. The are father, mother and the teacher. I would like to share with you the response I received from one of the staff members of IISc for these remarks. He had written, "The words that only three people Father, Mother and Elementary School Teacher can remove corruption, are extremely true". He further stated that he had taught his daughter that she should always speak the truth and that if she speaks the truth she will have no fear in life. Today she is 10 years old but when she was in her 2nd Standard she had not gone for school for one day because he had taken her to a function at his friend's place. In her leave letter he had mentioned that due to unavoidable circumstances she couldn't attend school. She immediately remarked that, "Why I should say unavoidable circumstances and not those we had to attend a function. You have told me not to tell lies why should I tell lies". Then he realized his mistake and changed the leave letter with correct information. This is the power of teaching children at a young age to be honest, which also enables us to be corrected by the child if we deviate from our righteous path. Honesty comes out of righteousness. Once taught the children become conscious keepers. Once you start giving the right direction in the minds of the Children, character building emanates from the family. "I will make my home a righteous home" should be the motto of each and every Bharat Scouts and Guides cadets.

**Clean habitat is my goal**

The status of environmental cleanliness is one of the indicators of development of a nation. As a nation, we have to keep our environment clean and tidy and it has to start from the home. This is essential for better health condition for all the citizens and also for presenting a wholesome and aesthetic atmosphere for us. It is essential that we keep all our places of worship and rivers clean and tidy to preserve their innate divinity. Members of the Bharat Scouts and Guides can promote a clean habitat movement in their home and surroundings and participate in imparting the

